# ಪ್ರವಾದಿ ಇಬ್ರಾಹೀಮ್(ಅ)
# ಜೀವನ ಮತ್ತು ಸಂದೇಶ

ಡಾ. ಎಸ್. ಅಬ್ದುಲ್ ಕರೀಮ್ ತ್ಯಾವಣಿಗೆ

ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

'ಪ್ರವಾದಿ ಇಬ್ರಾಹೀಮ್(ಅ) ಜೀವನ ಮತ್ತು ಸಂದೇಶ' ಎಂಬ ಈ ಕೃತಿಯ ಮೂಲಕ ಆ ಮಹಾನ್ ಪ್ರವಾದಿಯ ತ್ಯಾಗೋಜ್ವಲ ಜೀವನದ ಕಡೆಗೆ ಬೆಳಕು ಚೆಲ್ಲುವ ಪ್ರಯತ್ನವನ್ನು ದಾವಣಗೆರೆಯ ನಿವೃತ್ತ ಅಧ್ಯಾಪಕರಾದ ಎಸ್. ಅಬ್ದುಲ್ ಕರೀಮ್ ಸಾಹೇಬರು ಮಾಡಿದ್ದಾರೆ. ಕುರ್‌ಆನಿನಲ್ಲಿ ಅಲ್ಲಲ್ಲಿ ಹರಡಿಕೊಂಡಿರುವ ಪ್ರವಾದಿ ಇಬ್ರಾಹೀಮ್‌ರ ಜೀವನ ವೃತ್ತಾಂತವನ್ನು ಕ್ರೋಢೀಕರಿಸಿ ಇತರ ಗ್ರಂಥಗಳ ಸಹಾಯದಿಂದ ಇದನ್ನು ಅವರು ತಯಾರಿಸಿದ್ದಾರೆ.

ಪ್ರವಾದಿ ಇಬ್ರಾಹೀಮ್ ಅಲ್ಲಾಹನ ಆಪ್ತ (ಖಲೀಲುಲ್ಲಾಹ್) ಎಂಬ ಬಿರುದಿಗೆ ಪಾತ್ರರಾದವರು. ಜೀವನದುದ್ದಕ್ಕೂ ಅನೇಕ ರೀತಿಯ ಸತ್ವ ಪರೀಕ್ಷೆಗಳನ್ನು ಧೈರ್ಯವಾಗಿ ಎದುರಿಸಿ ಅವೆಲ್ಲದರಲ್ಲೂ ತೇರ್ಗಡೆಯಾದಾಗ ಅಲ್ಲಾಹನು ಅವರಿಗೆ 'ಲೋಕ ನಾಯಕ'ನೆಂಬ ಸ್ಥಾನವನ್ನು ದಯಪಾಲಿಸಿದನು. ಅವರ ಬದುಕನ್ನು ಮುಸ್ಲಿಮ್ ಸಮುದಾಯಕ್ಕೆ ಆದರ್ಶವಾಗಿ ಎತ್ತಿ ತೋರಿಸಿರುವನು.

ಹ. ಇಬ್ರಾಹೀಮರು ತನ್ನ ಇಡೀ ಜೀವಮಾನದಲ್ಲಿ ಯಾವೆಲ್ಲ ಪರೀಕ್ಷೆಗಳನ್ನು ಎದುರಿಸಿದರು ಏನೆಲ್ಲ ಸಂಕಷ್ಟಗಳನ್ನು ಸಹಿಸಿದರು, ಯಾವೆಲ್ಲ ತ್ಯಾಗಕ್ಕೆ ಸಿದ್ಧರಾದರು, ಈ ಎಲ್ಲದರ ಹಿಂದೆ ಅವರಲ್ಲಿದ್ದ ಪ್ರೇರಕ ಶಕ್ತಿ ಯಾವುದಾಗಿತ್ತು ಎಂಬುದನ್ನೆಲ್ಲ ಲೇಖಕರು ಮನಮುಟ್ಟುವ ರೀತಿಯಲ್ಲಿ ವಿವರಿಸಿದ್ದಾರೆ. ಕನ್ನಡದಲ್ಲಿ ಪ್ರವಾದಿಗಳ ಚರಿತ್ರೆ ಕತೆಗಳು ವಿರಳವಾಗಿರುವ ಹಿನ್ನೆಲೆಯಲ್ಲಿ ಈ ಕೃತಿಯು ಒಂದು ಉತ್ತಮ ಸೇರ್ಪಡೆಯಾಗಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಪ್ರಸ್ತಾವನೆ

ಸರ್ವಸ್ತುತಿಗಳೂ ಏಕೈಕನಾದ ಅಲ್ಲಾಹನಿಗೆ ಮೀಸಲು. ಆತನ ಅಪಾರ ಅನುಗ್ರಹಗಳು ಪ್ರವಾದಿ ಮುಹಮ್ಮದ್(ಸ) ಹಾಗೂ ಅವರ ಸಂತತಿಯ ಮೇಲೆ ಸದಾ ವರ್ಷಿಸುತ್ತಿರಲಿ. ಆತನ ಅಪಾರ ಕರುಣೆ, ನನಗೆ ಪ್ರವಾದಿ ಇಬ್ರಾಹೀಮ್‌ರವರ(ಅ) ಜೀವನ ಮತ್ತು ಸಂದೇಶದ ಬಗ್ಗೆ ಬರೆಯುವ ಸೌಭಾಗ್ಯ ಒದಗಿದೆ. ಇದನ್ನು ಬರೆಯಲು ಪ್ರೇರೇಪಿಸಿದ ನನ್ನ ಎಲ್ಲಾ ಸ್ನೇಹಿತರಿಗೂ ಜನಾಬ್ ಮುಲ್ಲಾ ಲಿಯಾಕತ್ ಅಹಮದ್ ಸಾಹೇಬ್ ಹುಬ್ಬಳ್ಳಿ ಇವರಿಗೂ ನಾನು ಚಿರಋಣಿ. ಪ್ರವಾದಿ ಇಬ್ರಾಹೀಮ್‌ರವರು(ಅ) ಬಾಲ್ಯದಿಂದಲೂ ಸತ್ಯವನ್ನು ಶೋಧಿಸಿ ಅದನ್ನು ಜನರಲ್ಲಿ ಬೋಧಿಸಲು ಹಗಲಿರುಳೂ ಶ್ರಮಿಸಬೇಕಾಯಿತು. ಈ ಕಾರ್ಯ ಅಷ್ಟೊಂದು ಸುಲಭವಾಗಿರಲಿಲ್ಲ. ತಂದೆ, ತಾಯಿ, ನೆಂಟರಿಷ್ಟರು, ಅಂದಿನ ಜನ ಸಮೂಹ, ಎಲ್ಲರೂ ಅವರ ಶತ್ರುಗಳಾದರು. ರಾಜ್ಯದ ಮಹಾ ಪುರೋಹಿತರ ಮನೆಯಲ್ಲಿ ಹುಟ್ಟಿ ಬೆಳೆದು, ಬಹುದೇವಾರಾಧಕರ ಸಮೂಹದಲ್ಲಿ ಜೀವನ ಕಳೆಯುತ್ತಾ ಏಕದೇವ ಸಿದ್ಧಾಂತವನ್ನು ಜನಮನದಲ್ಲಿ ಬೆಳಗಿಸಲು ಸತತ ಪ್ರಯತ್ನ ಮಾಡಿದರು.

ಈ ಕಾರ್ಯಕ್ಕಾಗಿ ಅವರು ಬಹಳ ಬೆಲೆ ತೆರಬೇಕಾಯಿತು. ತಂದೆಯ ಆಕ್ರೋಶಕ್ಕೆ ಒಳಗಾಗಿ ಜನರ ದ್ವೇಷದಿಂದ ಬೇಸತ್ತು ಕೊನೆಗೆ ರಾಜನ ಆಸ್ಥಾನದಲ್ಲಿ ಬೆಂಕಿಗೆ ಆಹುತಿಯಾಗುವ ಪರೀಕ್ಷೆಯನ್ನು ಎದುರಿಸಬೇಕಾಯಿತು. ಇದಾವುದನ್ನೂ ಲೆಕ್ಕಿಸದೆ ಈ ಕರ್ಮಯೋಗಿ ತನ್ನ ಅಚಲ ನಂಬಿಕೆಯಿಂದ ಮುನ್ನಡೆಯುತ್ತಾರೆ. ಅಲ್ಲಾಹನು ಅವರನ್ನು ಬೆಂಕಿಯ ಜ್ವಾಲೆಯಿಂದ ರಕ್ಷಿಸಿ ಹೊರ ತೆಗೆದಾಗಲೂ ಸಹ ಅಜ್ಞಾನಿಗಳಾದ ಜನಸಮೂಹ ಅವರನ್ನು ನಂಬಲಿಲ್ಲ. ಅವರು ಕೊನೆಗೆ ಮನೆ, ತಂದೆ-ತಾಯಿ, ಮಾತೃಭೂಮಿ ಹಾಗೂ ಸರ್ವಸ್ವವನ್ನೂ ತೊರೆದು ಅಲ್ಲಾಹನ ಮಾರ್ಗದಲ್ಲಿ ಏಕಾಂಗಿಯಾಗಿ ಹೊರಡಲನುವಾಗುತ್ತಾರೆ. ಈ ಏಕದೇವ ಸಿದ್ಧಾಂತದ ಹರಿಕಾರ ಇರಾಕ್ ತೊರೆದು, ಸಿರಿಯಾ, ಈಜಿಪ್ಟ್, ಜೋರ್ಡಾನ್, ಅರೇಬಿಯಾ ಮೊದಲಾದ ಕಡೆಗಳಲ್ಲಿ ಅಲೆದು ತನ್ನ ಸಿದ್ಧಾಂತವನ್ನು ಜನರಿಗೆ ತಲುಪಿಸಲು ಸತತ ಪ್ರಯತ್ನ ಮಾಡುತ್ತಾರೆ.

ಒಂದರ ಮೇಲೊಂದರಂತೆ ಪರೀಕ್ಷೆಗಳ ಸರಮಾಲೆ....! ಅವರಿಗೆ ಅಲ್ಲಾಹನ ಆಜ್ಞೆಯೇ ಶ್ರೇಷ್ಠ. ಅದಕ್ಕಾಗಿ ಅಬಲೆಯಾದ ಪತ್ನಿ ಹಾಜರ ಹಾಗೂ ಎಳೆಯ ಕಂದಮ್ಮ ಇಸ್ಮಾಈಲ್‌ರವರನ್ನು ನೀರು, ನೆರಳುಗಳಿಲ್ಲದ ನಿರ್ಜನ ಪ್ರದೇಶ ಮಕ್ಕಾದ ಕಣಿವೆಯಲ್ಲಿ

ಬಿಟ್ಟು ಬರಲು ಸಹ ಹಿಂಜರಿಯಲಿಲ್ಲ. ಪರೀಕ್ಷೆ ಅಷ್ಟಕ್ಕೇ ನಿಲ್ಲಲಿಲ್ಲ....! ಒಬ್ಬ ಸತ್ಯವಿಶ್ವಾಸಿಯು ಅಲ್ಲಾಹನನ್ನು ಅತ್ಯಧಿಕ ಪ್ರೀತಿಸಬೇಕು. ತನ್ನ ಹೆಂಡತಿ-ಮಕ್ಕಳು, ತಂದೆ, ತಾಯಿ, ತನ್ನ ಸಂಪತ್ತು ಹೆಚ್ಚೇಕೆ ತನ್ನ ಪ್ರಾಣಕ್ಕಿಂತಲೂ ಅಧಿಕವಾಗಿ ಒಬ್ಬ ನೈಜ ದಾಸನು ತನ್ನ ಪ್ರಭುವನ್ನು ಪ್ರೀತಿಸಬೇಕು. ಇದು ನೈಜ ಆರಾಧನೆಯ ಪ್ರತೀಕ. ಇದರಿಂದಾಗಿ, ಮುಪ್ಪಿನ ಊರುಗೋಲಾಗಿದ್ದ ತನ್ನ ಕರುಳ ಕುಡಿಯನ್ನು ಅಲ್ಲಾಹನ ಹೆಸರಿನಲ್ಲಿ ಬಲಿ ಕೊಡಬೇಕಾದ ಸಂದರ್ಭದಲ್ಲಿಯೂ ಸಹ ಅಂಜದೆ, ಅಳುಕದೆ ಈ ಮಹಾತ್ಯಾಗಿ ತನ್ನ ಮಗನನ್ನು ಬಲಿ ಕೊಡಲು ಮುಂದಾಗುತ್ತಾರೆ. ಇದರಿಂದಾಗಿ ಅಲ್ಲಾಹನು ಸಂತುಷ್ಟನಾಗಿ ಅವರನ್ನು ಸರ್ವ ಜನರ ನಾಯಕರನ್ನಾಗಿ ಆರಿಸಿಕೊಳ್ಳುತ್ತಾನೆ. ಅವರಿಗೆ ಬೇಕಾದುದು ಅಲ್ಲಾಹನ ಸಂಪ್ರೀತಿ, ತನ್ನನ್ನು ತಾನು ಅರ್ಪಿಸುವ ಮನೋಭಾವ, ಉತ್ಕಟ ದಾಸ್ಯ ಭಾವನೆ....! ಇಂತಹ ಉಜ್ವಲ ಭಕ್ತಿಭಾವಗಳ, ತ್ಯಾಗದ ಪ್ರತೀಕವಾಗಿದ್ದ ಪ್ರವಾದಿಯ ಜೀವನದ ಬಗ್ಗೆ ಬರೆಯುವುದು ಅಷ್ಟು ಸುಲಭವಲ್ಲ...! ಅವರ ಬಗ್ಗೆ ಬರೆಯುವಾಗ ಅನೇಕ ಸಾರಿ ಅತ್ತಿದ್ದೇನೆ....! ಆದರ್ಶ ಪತ್ನಿಯ ರೂಪದಲ್ಲಿ ತ್ಯಾಗಮಯಿ ಹಾಜರಾರವರ(ಅ) ಉಜ್ವಲ ಭಾವನೆಗಳನ್ನು, ಇಸ್ಮಾಈಲ್‌ರವರ ಸಹಜ ವಿಧೇಯತೆಯನ್ನು ಚಿತ್ರಿಸುವಾಗ ಹೃದಯ ತುಂಬುತ್ತದೆ. ಇಬ್ರಾಹೀಮ್‌ರವರ(ಅ) ಮಹೋನ್ನತ ತ್ಯಾಗ ಬಲಿದಾನದ ರೋಚಕ ಕಥೆಯನ್ನು ಬರೆಯುವುದರಲ್ಲಿ ಅದೆಷ್ಟು ತಪ್ಪಿರುವೆನೋ ನನಗೆ ತಿಳಿಯದು. ಓದುಗರು ಇದನ್ನು ವಿಮರ್ಶಾತ್ಮಕ ದೃಷ್ಟಿಯಲ್ಲಿ ಓದಬೇಕೆಂದು ವಿನಂತಿಸುತ್ತೇನೆ. ಕುರ್‌ಆನ್ ಸೂಕ್ತಗಳ ಮತ್ತು ಇತರ ಪುಸ್ತಕಗಳ ಆಧಾರದಲ್ಲಿ ಈ ಕಿರು ಹೊತ್ತಿಗೆಯನ್ನು ತಮ್ಮ ಮುಂದಿಟ್ಟಿರುವೆನು. ಇದು ಪ್ರವಾದಿಗಳ ಜೀವನ ಚರಿತ್ರೆಯ ಸಾಹಿತ್ಯಕ್ಕೆ ಸೇರ್ಪಡೆಯಾಗಲೆಂದು ಆಶಿಸುತ್ತೇನೆ. ಅವರ ಜೀವನ ಮತ್ತು ಸಂದೇಶವನ್ನು ತಿಳಿಯಲು ಕನ್ನಡ ನಾಡಿನ ಸಮಸ್ತ ಜನತೆಗೆ ಸಹಕಾರಿಯಾಗಲೆಂದು ಹಾರೈಸುತ್ತೇನೆ. ಇದು ನನ್ನ ಪರಲೋಕ ಮೋಕ್ಷಕ್ಕೆ ಹೇತುವಾಗಲೆಂದು ಪ್ರಾರ್ಥಿಸುತ್ತೇನೆ ಹಾಗೂ ಸರ್ವಶಕ್ತನಾದ ಜಗದೊಡೆಯನು ಈ ವಿನಮ್ರ ಸೇವೆಯನ್ನು ಸ್ವೀಕರಿಸಿ ಇದನ್ನು ನಮ್ಮೆಲ್ಲರ ಪಾಲಿಗೆ ಉದಯುಕ್ತಗೊಳಿಸಲಿ ಎಂದು ಪ್ರಾರ್ಥಿಸುತ್ತೇನೆ.

**ಡಾ. ಎಸ್. ಅಬ್ದುಲ್ ಕರೀಮ್ ತ್ಯಾವಣಿಗೆ**

## ಅನುಕ್ರಮಣಿಕೆ

# ಅರ್ಪಣೆ

ಜಗತ್ತಿನ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ
ಸತ್ಯವನ್ನು ಮರೆಮಾಚುವವರ ವಿರುದ್ಧ
ಅಸತ್ಯವನ್ನು ಕೊನೆಗಾಣಿಸಲು ಹಗಲಿರುಳೂ
ಹೋರಾಡಿದ ಮಹಾ ಕರ್ಮಯೋಗಿಗಳಿಗೆ
ಅರ್ಪಣೆ ಹಾಗೂ ಸಮಕಾಲೀನ ವ್ಯಕ್ತಿಯಾಗಿ
ಇಸ್ಲಾಮನ್ನು ಇತರರಿಗೆ ಬೋಧಿಸುವುದರಲ್ಲಿ
ಸತತ ಪ್ರಯತ್ನ ಮಾಡಿದ, ಕಿರಿಯರಿಗೆ
ಅಣ್ಣನಂತೆ, ಆದರ್ಶ ಹಿತಚಿಂತಕರಂತೆ
ತನ್ನ ಇಡೀ ಜೀವನವನ್ನು ಮುಡುಪಾಗಿಟ್ಟ, ಉತ್ತಮ
ವಾಗ್ಮಿ, ಶ್ರೇಷ್ಠ ಬರಹಗಾರ, ಆದರ್ಶ
ವ್ಯಕ್ತಿ - ಧರ್ಮನಿಷ್ಠೆಯ ಜೀವನ ಸಾಗಿಸಿದ
ಕರ್ಮಯೋಗಿ ಮರ್ಹೂಮ್ ಇಬ್ರಾಹೀಮ್ ಸಈದ್‌ರವರಿಗೆ
ಅಲ್ಲಾಹನು ಸ್ವರ್ಗದಲ್ಲಿ ಉನ್ನತ
ಸ್ಥಾನವನ್ನು ದಯಪಾಲಿಸಲೆಂದು
ನಾವೆಲ್ಲರೂ ಪ್ರಾರ್ಥಿಸೋಣ!

لَقَدْ كَانَ لَكُمْ فِيهِمْ أُسْوَةٌ حَسَنَةٌ
لِّمَن كَانَ يَرْجُوا اللَّهَ وَالْيَوْمَ الْآخِرَ ۚ
وَمَن يَتَوَلَّ فَإِنَّ اللَّهَ هُوَ الْغَنِيُّ الْحَمِيدُ ﴿٦﴾

ನಿಮಗೆ ಮತ್ತು ಅಲ್ಲಾಹನಲ್ಲೂ ಪುನರುತ್ಥಾನ ದಿನದಲ್ಲೂ ನಿರೀಕ್ಷೆ ಇರಿಸಿರುವ ಪ್ರತಿಯೊಬ್ಬನಿಗೆ, ಅವರ ಚರ್ಯೆಯಲ್ಲಿ ಉತ್ತಮ ಆದರ್ಶವಿದೆ. ಯಾರಾದರೂ ಇದರಿಂದ ವಿಮುಖರಾದರೆ, ಅಲ್ಲಾಹನು ನಿರಪೇಕ್ಷನೂ ಸ್ವಯಂ ಪ್ರಶಂಸಾರ್ಹನೂ ಆಗಿರುತ್ತಾನೆ.

(ಪವಿತ್ರ ಕುರ್‌ಆನ್, 60:6)

# ಇರಾಕಿನ ಪೂರ್ವ ಇತಿಹಾಸ ಹಾಗೂ ಸಂಸ್ಕೃತಿ

ಇಬ್ರಾಹೀಮ್‌ರವರ(ಅ) ಕಾಲ ಸುಮಾರು 4000 ವರ್ಷಗಳಿಗಿಂತ ಹಳೆಯದು. ಅವರು ಜನಿಸಿದ್ದು ಇರಾಕಿನ ರಾಜಧಾನಿ 'ಉರ್' ಪಟ್ಟಣದಲ್ಲಿ. ಐತಿಹಾಸಿಕ ಮೂಲಗಳಿಂದ ತಿಳಿದುಬರುವಂತೆ ಅಲ್ಲಿಯ ಜನಸಂಖ್ಯೆ ಸುಮಾರು 5 ಲಕ್ಷವಿರಬಹುದು. ಅಲ್ಲಿಯ ಜನರು ಹೆಚ್ಚಾಗಿ ಆಡಂಬರದ ಜೀವನ ನಡೆಸುತ್ತಿದ್ದರು. ಭೌತಿಕವಾದಿಗಳಾಗಿದ್ದರು. ಬಡ್ಡಿಯ ವ್ಯವಹಾರ ಹದಮೀರಿತ್ತು. ಬಹುದೇವಾರಾಧನೆ ಪ್ರಚಲಿತವಿತ್ತು. ಅಲ್ಲಿಯ ಜನರನ್ನು ಮೂರು ಮುಖ್ಯ ಭಾಗಗಳಾಗಿ ವಿಂಗಡಿಸಲಾಗಿತ್ತು. ಅದರಲ್ಲಿ 'ಅಮಿಲೋ' ಪ್ರಥಮ ವರ್ಗ. ಇವರು ಅತ್ಯಂತ ಪ್ರಭಾವಶಾಲಿಗಳಾಗಿದ್ದರು. ಎರಡನೆಯ ವರ್ಗ 'ಮಶ್‌ಕಿನೋ.' ಇವರು ಸಾಮಾನ್ಯವಾಗಿ ವರ್ತಕರು ಹಾಗೂ ವ್ಯವಸಾಯಗಾರರಾಗಿದ್ದರು. ಮೂರನೆಯ ವರ್ಗ 'ಆರ್‌ದೂ.' ಇವರೆಲ್ಲರೂ ಕೆಳವರ್ಗದವರಾಗಿದ್ದರು.

ಇಂತಹ ಪರಿಸರದ ಪ್ರಥಮ ವರ್ಗದ 'ಅಮಿಲೋ'ದಲ್ಲಿ ರಾಷ್ಟ್ರದ ಅತ್ಯಂತ ಶ್ರೇಷ್ಠ ಪುರೋಹಿತರಾಗಿದ್ದ 'ಆಝರ್'ರವರ ಮನೆಯಲ್ಲಿ ಇಬ್ರಾಹೀಮ್‌ರವರ ಜನನ. ಅಲ್ಲಿಯ ಅರಸನ ಹೆಸರು 'ನಮ್ರೂದ್.' ರಾಜನೂ ಸಹ ಪುರೋಹಿತ ಶಾಹಿಯ ಅಧೀನಕ್ಕೆ ಒಳಪಡಬೇಕಿತ್ತು. ಪುರೋಹಿತನೇ ಅಲ್ಲಿಯ ಮುಖ್ಯ ನ್ಯಾಯಾಧೀಶ. ಆತನ ತೀರ್ಮಾನವೇ ಅಂತಿಮ. 'ರಾಜಾ ಪ್ರತ್ಯಕ್ಷ ದೇವತಾ' ಎಂಬ ಬಲವಾದ ನಂಬಿಕೆಯಿತ್ತು.

ಶಿಲಾ ಲೇಖಗಳ ಅಧ್ಯಯನದಿಂದ ತಿಳಿದಿರುವಂತೆ, ಅಲ್ಲಿಯ ಜನರು ಸುಮಾರು 5000 ದೇವರನ್ನು ಆರಾಧಿಸುತ್ತಿದ್ದರು. ಪ್ರತಿ ಪಟ್ಟಣ ಹಾಗೂ ಊರಿಗೂ ಪ್ರತ್ಯೇಕ ದೇವರುಗಳಿದ್ದರು. ನಗರ ದೇವತೆಯನ್ನು 'ಮಹಾದೇವ' ಹಾಗೂ 'ಆರಾಧ್ಯ ನಾಯಕ' ಎಂದು ಕರೆಯುತ್ತಿದ್ದರು. ಉರ್ ನಗರಕ್ಕೂ ಸಹ ಪ್ರತ್ಯೇಕ ದೇವರಿದ್ದನು. ಆತನ ಹೆಸರು "ನನ್ನಾರ್(ಚಂದ್ರದೇವನು)." ಇನ್ನೊಂದು ದೊಡ್ಡ ನಗರ "ನರ್‌ಸ." ಇದರ ದೇವರು "ಶಮಾಶ್"(ಸೂರ್ಯ ದೇವನು). ನನ್ನಾರ್‌ನ ಮೂರ್ತಿಯನ್ನು ಉರ್ ನಗರದ ಅತೀ ಎತ್ತರದ ಬೆಟ್ಟದ ತುದಿಯಲ್ಲಿ ಪ್ರತಿಷ್ಠಾಪಿಸಿದ್ದರು. ಅದರ ಬದಿಯಲ್ಲಿಯೇ ಅದರ ಪತ್ನಿ 'ನಿನ್‌ಗಲ್'ಳ ಮಂದಿರವಿತ್ತು. ನನ್ನಾರ್‌ನ ಮಂದಿರ ದೊಡ್ಡ ಅರಮನೆಯಂತಿತ್ತು. ಅದಕ್ಕೆ ಪ್ರತ್ಯೇಕ ಮಲಗುವ ಕೋಣೆಯಿತ್ತು. ಅಲ್ಲಿಗೆ ಪ್ರತಿದಿನ ಓರ್ವ ಪೂಜಾರಿಣಿ ಹೋಗಿ ಅದರ ಮದುವಣಗಿತ್ತಿ ಆಗುತ್ತಿದ್ದಳು. ಈ ರೀತಿ ಹಲವಾರು ಸ್ತ್ರೀಯರು ಆ ದೇವಾಲಯದಲ್ಲಿ ಇರುತ್ತಿದ್ದರು. ಇವರೆಲ್ಲರ ಸ್ಥಿತಿಯು ದೇವ ದಾಸಿಯರಂತಿತ್ತು. ಇಲ್ಲಿ ನಿರಂತರ ಸ್ತ್ರೀಯರ,

ಬಡವರ, ಬಲಹೀನರ ಶೋಷಣೆಯಾಗುತ್ತಿತ್ತು. ಪ್ರಥಮ ವರ್ಗ ಈ ಶೋಷಣೆಯ ರೂವಾರಿಗಳಾಗಿದ್ದರು.

## ಇಬ್ರಾಹೀಮ್‌ರವರ ಜನನ-ಬಾಲ್ಯ

ಇಂತಹ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ರಾಜಧಾನಿ 'ಉರ್' ನಗರದ ಪ್ರತಿಷ್ಠಿತ ಪುರೋಹಿತ ಮನೆತನದ 'ಆಝರ್'ರವರಿಗೆ ಒಂದು ಗಂಡು ಮಗು ಹುಟ್ಟುತ್ತದೆ. ಅವರೇ ಇಬ್ರಾಹೀಮ್. ಇವರು ಬಾಲ್ಯದಲ್ಲಿಯೇ ಪ್ರಕೃತಿಯ ಬಗ್ಗೆ, ಸೂರ್ಯ, ಚಂದ್ರ, ನಕ್ಷತ್ರಗಳು ಹಾಗೂ ಆಕಾಶ ಭೂಮಿಯ ಬಗ್ಗೆ ಯೋಚಿಸುತ್ತಾ ಇದರಲ್ಲಿ ಅಡಗಿರುವ ನಿಗೂಢ ಸತ್ಯವನ್ನು ಅರಸುತ್ತಾರೆ. ಉತ್ತರ ದೊರೆಯದೆ ಹಗಲಿರುಳೂ ಸತ್ಯದ ಹಾದಿಯಲ್ಲಿ ಮಗ್ನರಾಗುತ್ತಾರೆ. ಸುತ್ತಲೂ ನೂರಾರು ದೇವರುಗಳ ಆರಾಧನೆ, ಚಂದ್ರ-ಸೂರ್ಯ-ನಕ್ಷತ್ರಗಳ ಪೂಜೆ...! ಇವರ ಮನಸ್ಸು ಏನನ್ನೋ ಅರಸುತ್ತದೆ.

ಒಂದು ರಾತ್ರಿ ಅವರು ಆಕಾಶದತ್ತ ನೋಡುತ್ತಾ ಕುಳಿತಿದ್ದಾರೆ. ದೊಡ್ಡ ನಕ್ಷತ್ರ ಅವರ ಕಣ್ಣಿಗೆ ಬೀಳುತ್ತದೆ. ಇದನ್ನು ಕಂಡು "ಇದು ನನ್ನ ಪ್ರಭು" ಎಂದು ಆನಂದಿಸುತ್ತಾರೆ. ನೋಡ ನೋಡುತ್ತಾ ಆ ನಕ್ಷತ್ರವು ಮರೆಯಾಗುತ್ತದೆ. ಇದರಿಂದ ಖಿನ್ನರಾದ ಇಬ್ರಾಹೀಮ್‌ರವರು "ಮುಳುಗುವ ವಸ್ತು ಪ್ರಭುವಾಗಲು ಸಾಧ್ಯವಿಲ್ಲ" ಎಂದು ಮನೆಗೆ ಹೋಗುತ್ತಾರೆ. ಮಾರನೆಯ ದಿನ ಪುನಃ ಆಕಾಶ ದರ್ಶನ. ಪೂರ್ಣ ಚಂದ್ರನನ್ನು ಕಂಡು "ಇದು ನಕ್ಷತ್ರಕ್ಕಿಂತ ಪ್ರಕಾಶಮಾನವಾಗಿದೆ, ಇದು ನನ್ನ ಪ್ರಭು" ಎಂದು ಆನಂದಿಸುತ್ತಾರೆ. ಆದರೆ ಅದೂ ಸಹ ಸ್ವಲ್ಪ ಹೊತ್ತಿನಲ್ಲಿ ಮರೆಯಾಗುತ್ತದೆ. ಆಗ ಅವರು "ಮುಳುಗುವ ಈ ಚಂದ್ರ ನನ್ನ ಪ್ರಭುವಾಗಲಾರದು" ಎಂದು ಹೇಳಿಕೊಳ್ಳುತ್ತಾರೆ. ಮಾರನೆಯ ದಿನ ಪ್ರಕಾಶಮಾನವಾದ ಸೂರ್ಯನನ್ನು ನೋಡಿ "ಇದು ಎಲ್ಲಕ್ಕಿಂತ ದೊಡ್ಡದಾಗಿದೆ, ಪ್ರಕಾಶಮಾನವಾಗಿದೆ, ಇದುವೇ ನನ್ನ ಪ್ರಭು" ಎಂದು ಹೇಳುತ್ತಾರೆ. ಆದರೆ ಅದೂ ಸಹ ಸಾಯಂಕಾಲ ಅಸ್ತಮಿಸುತ್ತದೆ. "ಈ ಅಸ್ತಮಿಸುವ ವಸ್ತುಗಳು ಪ್ರಭುವಾಗಲಾರವು" ಎನ್ನುತ್ತಾ ಇವುಗಳನ್ನೆಲ್ಲಾ ಸೃಷ್ಟಿಸಿದ ಏಕೈಕ ಸೃಷ್ಟಿಕರ್ತನನ್ನು ಮಾತ್ರ ನಂಬುತ್ತೇನೆ,

**"ನಾನು ಏಕನಿಷ್ಠೆಯಿಂದ ನನ್ನ ಮುಖವನ್ನು ಭೂಮಿ-ಆಕಾಶಗಳನ್ನು ಸೃಷ್ಟಿಸಿದವನ ಕಡೆಗೆ ತಿರುಗಿಸಿದೆನು. ನಾನು ಎಷ್ಟು ಮಾತ್ರಕ್ಕೂ ಅಲ್ಲಾಹನೊಂದಿಗೆ ಸಹಭಾಗಿಗಳನ್ನಾಗಿ ಮಾಡುವವರಲ್ಲಿ ಸೇರಿದವನಲ್ಲ" (ಪವಿತ್ರ ಕುರ್‌ಆನ್, 6:79)**

ಎಂದು ಸೃಷ್ಟಿಯನ್ನು ತೊರೆದು ಸೃಷ್ಟಿಕರ್ತನ ಬಗ್ಗೆ ಚಿಂತನೆ ಮಾಡುತ್ತಾರೆ. ಅವರ ಮನಸ್ಸು ಏಕೈಕ ಅಲ್ಲಾಹನ ಬಗ್ಗೆ ಯೋಚಿಸುತ್ತದೆ.

ಒಂದು ಕಡೆ ನೂರಾರು ದೇವರುಗಳ ಆರಾಧನೆ, ಅವರಲ್ಲಿ ಅವರ ತಂದೆ ಆಝರ್ ಮಹಾ ಪುರೋಹಿತರಾಗಿ ಜನಸಾಮಾನ್ಯರಲ್ಲಿ ಪ್ರತಿಷ್ಠಿತರಾಗಿದ್ದಾರೆ. ಇತ್ತ ಮಗನ ವಿಚಾರಧಾರೆಯೇ ಬೇರೆ. ಬೇಸತ್ತ ಮಗ ಇಬ್ರಾಹೀಮ್‌ರವರು ಏಕದೇವನನ್ನು ನಂಬಿದ್ದಾರೆ.

ಮಗನ ನಡವಳಿಕೆ ತಂದೆಗೆ ಹಿಡಿಸುತ್ತಿಲ್ಲ. ತಂದೆಯ ಬಹುದೇವ ವಿಶ್ವಾಸ ಮಗನಿಗೆ ಹಿಡಿಸುತ್ತಿಲ್ಲ. ಒಂದು ದಿನ ಇಬ್ರಾಹೀಮ್‌ರವರು ತಂದೆಯ ಬಳಿ ಬಂದು ಪ್ರೀತಿಯಿಂದ

"ಪ್ರೀತಿಯ ಅಪ್ಪಾ! ನೋಡಲಾಗದ, ಆಲಿಸಲಾಗದ, ತಮಗೆ ಅಪಾಯ ಒದಗಿದಾಗ ಪ್ರತಿರೋಧ ಮಾಡಲಾಗದ ಈ ದೇವರುಗಳನ್ನು ನೀವೇಕೆ ಆರಾಧಿಸುತ್ತೀರಿ? ನೀವೂ ನಿಮ್ಮ ಜನಾಂಗವೂ ಪಥಭ್ರಷ್ಟತೆಯಲ್ಲಿರುವುದಾಗಿ ಕಾಣುತ್ತದೆ. ಅಪ್ಪಾ! ತಮಗೆ ಬಂದಿರದ ಜ್ಞಾನವೊಂದು ನನ್ನ ಬಳಿ ಬಂದಿದೆ. ನೀವು ನನ್ನನ್ನು ಅನುಸರಿಸಿರಿ"

ಎಂದು ನಮ್ರತೆಯಿಂದ ಹೇಳುತ್ತಾರೆ. ಆಗ ತಂದೆ ಆಝರ್ ಕುಪಿತರಾಗಿ

"ಇಬ್ರಾಹೀಮ್! ನೀನು ನಮ್ಮ ಆರಾಧ್ಯ ದೇವರುಗಳಿಂದ ವಿಮುಖನಾಗಿರುವೆಯಾ? ಅವುಗಳನ್ನು ನೀನು ನಿಂದಿಸುವುದೇಕೆ? ಅವುಗಳನ್ನು ನೀನು ನಿರಾಕರಿಸುವೆಯಾ? ಇದರಿಂದ ನೀನು ವಿಮುಖನಾಗದಿದ್ದಲ್ಲಿ ನಾನು ನಿನ್ನನ್ನು ಕಲ್ಲೆಸೆದು ಕೊಂದು ಹಾಕುವೆನು. ನಿನ್ನ ಮುಖ ತೋರಿಸಬೇಡ ನೀನು ನನ್ನಿಂದ ಶಾಶ್ವತವಾಗಿ ತೊಲಗಿಬಿಡು" ಎಂದು ಗದರಿಸುತ್ತಾರೆ. ಈ ಬೆದರಿಕೆಗೆ ಅಂಜದೆ ಇಬ್ರಾಹೀಮ್‌ರವರು,

"ನನ್ನ ಪ್ರಭು ನನ್ನ ಮೇಲೆ ಅತ್ಯಧಿಕ ಕೃಪೆಯುಳ್ಳವನು. ಆತನೇ ನನ್ನ ರಕ್ಷಕನು. ನಾನು ತಮ್ಮನ್ನೂ ತಮ್ಮ ಸಂಗಡಿಗರನ್ನೂ ತೊರೆದು ಹೋಗುತ್ತೇನೆ" ಎಂದು ನುಡಿಯುತ್ತಾರೆ.

ಇಬ್ರಾಹೀಮ್‌ರವರ ಜೀವನ ಅತ್ಯಂತ ಸಂಘರ್ಷಮಯವಾಗಿತ್ತು. ತಂದೆಯ ಕಠೋರ ಮನಸ್ಸು, ಜನರ ವಕ್ರಮಾರ್ಗ, ಇವುಗಳ ಮಧ್ಯೆ ಇವರು ನಂಬಿದ್ದ ಏಕದೇವ ಸಿದ್ಧಾಂತ....! ಇದರಿಂದ ಅವರ ಮನಸ್ಸು ಹೊಯ್ದಾಡ ಹತ್ತಿತ್ತು. ತಂದೆ, ತಾಯಿ, ತಾಯ್ನಾಡು ಎಲ್ಲವನ್ನೂ ತೊರೆಯುವ ಕಾಲ ಸನ್ನಿಹಿತವಾದಂತೆ ತೋರುತ್ತದೆ. ಅತ್ತ ಜನರು ಇಬ್ರಾಹೀಮ್‌ರವರನ್ನು ಶಿಕ್ಷೆಗೆ ಗುರಿಪಡಿಸಬೇಕೆಂಬ ಹುನ್ನಾರದಲ್ಲಿದ್ದಾರೆ. ಅದಕ್ಕೆ ತಂದೆಯ ಕುಮ್ಮಕ್ಕೂ ಇದೆ. ದಿನೇದಿನೇ ಇವರ ವಿಚಾರಧಾರೆ ಇಡೀ ರಾಜ್ಯದಲ್ಲಿ ಹರಡುತ್ತದೆ. ಕೊನೆಗೆ ರಾಜನಿಗೂ ಮುಟ್ಟುತ್ತದೆ.

## ನಮ್ರೂದನ ದರಬಾರಿನಲ್ಲಿ

ಅದೊಂದು ದಿನ ರಾಜನ ದರಬಾರಿನಲ್ಲಿ ಪುರೋಹಿತರು, ಅಧಿಕಾರಿಗಳು, ಮಂತ್ರಿಗಳು ಹಾಗೂ ಪ್ರಮುಖ ಪ್ರಜೆಗಳು ನೆರೆದಿದ್ದಾರೆ. ಗಂಭೀರ ಚರ್ಚೆ ನಡೆಯುತ್ತಿದೆ. ಇಬ್ರಾಹೀಮ್‌ರವರ ಏಕದೇವ ಸಿದ್ಧಾಂತದ ಬಗ್ಗೆ ಚರ್ಚೆ....! ಇದನ್ನು ಯಾರೂ ಒಪ್ಪುತ್ತಿಲ್ಲ. ಇದು ಅವರೆಲ್ಲರಿಗೂ ಸವಾಲಾಗಿ ಪರಿಣಮಿಸಿತ್ತು. ಹೇಗಾದರೂ ಮಾಡಿ ಇದನ್ನು ಇತ್ಯರ್ಥಗೊಳಿಸಬೇಕೆಂದು ಅವರೆಲ್ಲಾ ನೆರೆದಿದ್ದರು. ಸರ್ವಾಧಿಕಾರಿ ರಾಜನ ದರ್ಬಾರು....! ತುಟಿ ಪಿಟಿಕ್ಕೆನ್ನದೆ ಜನರು ಕುಳಿತಿದ್ದಾರೆ...! ಎತ್ತರವಾದ ಸಿಂಹಾಸನ. ತುಂಬಿದ ಸಭೆ. ಏಕದೇವ ಸಿದ್ಧಾಂತದ ರೂವಾರಿ ಇಬ್ರಾಹೀಮ್‌ರನ್ನು ಕರೆ ತಂದಿದ್ದಾರೆ. ರಾಜನು ದರ್ಪದಿಂದ ಇಬ್ರಾಹೀಮರನ್ನುದ್ದೇಶಿಸಿ,

"ನೀವು ನಮ್ಮ ದೇವರುಗಳಲ್ಲಿ ನಂಬಿಕೆ ಇಡುತ್ತಿಲ್ಲ ಹಾಗೂ ಅವುಗಳನ್ನು ದ್ವೇಷಿಸುವುದೇಕೆ?" ಎಂದಾಗ ಇಬ್ರಾಹೀಮ್‌ರವರು,

"ಯಾರ ಕೈಯಲ್ಲಿ ಜೀವನ ಮತ್ತು ಮರಣ ಇದೆಯೋ ಯಾರು ಏಕೈಕನೋ ಆತನನ್ನೇ ನಾನು ಆರಾಧಿಸುತ್ತೇನೆ" ಎಂದುತ್ತರಿಸುತ್ತಾರೆ. ಆಗ ನಮ್ರೂದನು,

"ನಾನೂ ಸಹ ರಕ್ಷಕ ಹಾಗೂ ಪರಿಪಾಲಕನಾಗಿರುವೆನು. ನನ್ನ ಹೊರತು ಬೇರೆ ಯಾರೂ ರಕ್ಷಕರಿಲ್ಲ ನಾನೇ ಸರ್ವಾಧಿಕಾರಿ" ಎಂದು ಹೇಳಿ ಇಬ್ಬರು ಕೈದಿಗಳನ್ನು ಕರೆತರಿಸಿ ಅವರಲ್ಲಿ ಒಬ್ಬ ನಿರಪರಾಧಿಯನ್ನು ವಧಿಸಿ ಅಪರಾಧಿಯನ್ನು ರಕ್ಷಿಸಿಬಿಡುತ್ತಾನೆ. ಈ ರೀತಿ ತಾನೂ ಸಹ ಪಾಲಕ ಪ್ರಭು ಎಂಬ ಟೊಳ್ಳು ಅಹಂಭಾವವನ್ನು ಪ್ರದರ್ಶಿಸುತ್ತಾನೆ. ಆಗ ಇಬ್ರಾಹೀಮ್‌ರವರು ಎದೆಗುಂದದೆ,

"ಹಾಗಾದರೆ ನನ್ನ ಪ್ರಭು ದಿನನಿತ್ಯ ಸೂರ್ಯನನ್ನು ಪೂರ್ವದಲ್ಲಿ ಉದಯಿಸಿ ಪಶ್ಚಿಮದಲ್ಲಿ ಮುಳುಗಿಸುತ್ತಾನೆ. ನಿನ್ನಲ್ಲಿ ಶಕ್ತಿ ಇದ್ದರೆ ನೀನು ಸೂರ್ಯನನ್ನು ಪಶ್ಚಿಮದಿಂದ ಉದಯಿಸಿ ಪೂರ್ವದಲ್ಲಿ ಮುಳುಗಿಸು"

ಎಂದು ಮರು ಸವಾಲು ಹಾಕುತ್ತಾರೆ. ಆಗ ನಮ್ರೂದನ ಅಹಂಕಾರ ಇಳಿದು ಉತ್ತರವಿಲ್ಲದೆ ಚಡಪಡಿಸುತ್ತಾನೆ. ನೆರೆದಿದ್ದ ಸಭಿಕರಲ್ಲಿ ಕೋಲಾಹಲ ಉಂಟಾಗುತ್ತದೆ. ನಮ್ರೂದನ ಅಹಂಕಾರಕ್ಕೆ ಧಕ್ಕೆಯಾಗುತ್ತದೆ. ಸಭಿಕರಲ್ಲಿ ಕೆಲವರು "ಇವನನ್ನು ವಧಿಸಬೇಕು" ಎಂದು ಬೊಬ್ಬಿರಿಯುತ್ತಾರೆ. ಇನ್ನು ಕೆಲವರು "ಜೀವಂತ ಸುಡಬೇಕು" ಎಂದು ಒಕ್ಕೊರಲಿನಿಂದ ಘೋಷಿಸುತ್ತಾರೆ. ಮುಂದೆ ಯಾರೂ ಇಂತಹ ಕೃತ್ಯಕ್ಕೆ ಕೈ ಹಾಕಬಾರದೆಂದು ಅವರನ್ನು ಕೆಲವು ಕಾಲ ಕಾರಾಗೃಹದಲ್ಲಿ ಬಂದಿಯಾಗಿಡುತ್ತಾರೆ.

## ಅಗ್ನಿಕುಂಡದ ತಯಾರಿ

ಉರ್ ನಗರದಲ್ಲಿ ಇಬ್ರಾಹೀಮ್‌ರವರನ್ನು(ಅ) ಜೀವಂತ ಸುಡುವ ಸಮಾಚಾರ ಮನೆ ಮಾತಾಗಿದೆ. ಒಬ್ಬ ದೇವನನ್ನು ಆರಾಧಿಸಬೇಕೆಂದು ಹೇಳಿರುವುದೇ ಅವರ ಅಪರಾಧ...! ಟನ್‌ಗಟ್ಟಲೆ ಕಟ್ಟಿಗೆ ರಾಶಿ....! ಒಬ್ಬ ವ್ಯಕ್ತಿಯನ್ನು ಸುಡಲು ಅಷ್ಟೊಂದು ಕಟ್ಟಿಗೆ ರಾಶಿ ಬೇಕಾಗಿತ್ತೆ? ಜನರು ಹಿಂದೆಂದೂ ಕಂಡರಿಯದ ಭಯಂಕರ ಅಗ್ನಿಕುಂಡ...! ಅಷ್ಟೊಂದು ಭಯಾನಕ ಭೀಭತ್ಸ ಅಗ್ನಿಜ್ವಾಲೆ....! ಬೆಂಕಿಯ ಕೆನ್ನಾಲಿಗೆ ಆಕಾಶಕ್ಕೆ ಮುಟ್ಟುತ್ತಿರುವಂತೆ ಕಾಣುತ್ತಿದೆ. ಒಬ್ಬ ಏಕದೇವ ವಿಶ್ವಾಸಿಯನ್ನು ಸುಡುವ ದೃಶ್ಯ ನೋಡಲು ದೇಶದ ನಾನಾ ಮೂಲೆಗಳಿಂದ ಜನರು ಬರುತ್ತಿದ್ದಾರೆ.... ಎತ್ತರವಾದ ಸಿಂಹಾಸನದಲ್ಲಿ ರಾಜನು ಕುಳಿತಿದ್ದಾನೆ. ಮಂತ್ರಿಗಳು, ಪುರೋಹಿತರು, ಪ್ರಜೆಗಳು ಆಸೀನರಾಗಿದ್ದಾರೆ. ತಂದೆ ಆಝರ್ ಸಹ ತನ್ನ ಮಗನನ್ನು ಸುಡುವ ದೃಶ್ಯ ನೋಡಲು ಕುಳಿತಿದ್ದಾನೆ. ಮಗನು ಬೆಂಕಿಯಲ್ಲಿ ದಹಿಸುವುದನ್ನು ಕಣ್ಣಾರೆ ನೋಡುವ ಆಸೆಯಿಂದ ಸುಖ ಭೋಗಗಳ ದಾಸನಾಗಿ, ದೌರ್ಜನ್ಯ, ಅವಿವೇಕದಲ್ಲಿ ಮುಳುಗಿರುವ ತಂದೆ ಕುಳಿತಿರುವ ದೃಶ್ಯ ಅದೆಷ್ಟು ಹೀನವಾಗಿತ್ತು....! ಅವರೆಲ್ಲರ ಎದುರು ಏಕದೇವ ಸಿದ್ಧಾಂತದ ಹರಿಕಾರ ಅಂಜದೆ ಅಳುಕದೆ ಎದೆಸೆಟೆದು ನಿಂತಿರುವುದನ್ನು ನೋಡಿದರೆ ಅವರಲ್ಲಿದ್ದ ಅಪಾರ ನಂಬಿಕೆಯ ಅರಿವಾಗುತ್ತಿತ್ತು. ಅವರ ಧೈರ್ಯ, ಮನೋಬಲ ಅಲ್ಲಾಹನಲ್ಲಿ

ಅಪಾರ ನಂಬಿಕೆಯನ್ನು ಅದೆಷ್ಟು ಕೊಂಡಾಡಿದರೂ ಸಾಲದು. ಧಗಧಗಿಸುತ್ತಿರುವ ಅಗ್ನಿಜ್ವಾಲೆಗಳೆದುರು ಅಲ್ಲಾಹನನ್ನೇ ನಂಬಿ ಆತನನ್ನೇ ಸ್ತುತಿಸುತ್ತಿರುವ ಏಕೈಕ ವ್ಯಕ್ತಿ ಇಬ್ರಾಹೀಮ್...! ಇವರನ್ನು ಬೆಂಕಿಯಲ್ಲಿ ಎಸೆಯಲು ಒಂದು ದೊಡ್ಡ ಕವಣೆಯನ್ನು ಸಿದ್ಧಗೊಳಿಸಿ ಅದರಲ್ಲಿ ಕೂರಿಸಿದ್ದಾರೆ. ಇನ್ನೇನು ಕೆಲವೇ ಕ್ಷಣಗಳಲ್ಲಿ ಅಗ್ನಿಗಾಹುತಿ ಮಾಡುವವರಿದ್ದಾರೆ. ಅಷ್ಟರಲ್ಲಿ ಒಬ್ಬ ದೇವಚರರು ಬಂದು,

"ಇಬ್ರಾಹೀಮ್....! ನೀವು ಇಚ್ಛಿಸಿದರೆ ನಾನು ನಿಮ್ಮನ್ನು ಬೆಂಕಿಯಿಂದ ಪಾರು ಮಾಡುತ್ತೇನೆ" ಎಂದಾಗ ಇಬ್ರಾಹೀಮ್‌ರವರು,

"ನಿಮ್ಮ ಸಹಾಯ ಯಾಚಿಸುವುದಾದರೆ ಏಕೈಕ ಅಲ್ಲಾಹನನ್ನು ನಾನೇಕೆ ಪ್ರಾರ್ಥಿಸಬೇಕು? ನನಗೆ ಅಲ್ಲಾಹ್ ಸಾಕು. ನನಗೆ ಆತನ ಹೊರತು ಬೇರೆ ಯಾರ ಆಸರೆಯೂ ಬೇಕಿಲ್ಲ. ಆತನ ಇಷ್ಟದಂತೆ ಆಗುತ್ತದೆ. ನನಗೆ ಯಾವುದರ ಭಯವೂ ಇಲ್ಲ ಎಂದುತ್ತರಿಸುತ್ತಾರೆ. (ಕುರ್‌ಆನ್) ಈ ಅದ್ಭುತ, ಅಚಲ ದೇವವಿಶ್ವಾಸದ ಮುಂದೆ ಜಗತ್ತಿನ ಜನರ ಪ್ರಯತ್ನಗಳೆಲ್ಲಾ ನುಚ್ಚು ನೂರಾದವು....

ಜನಸಾಗರ ಎವೆಯಿಕ್ಕದೆ ನೋಡುತ್ತಿದ್ದಾರೆ. ಎತ್ತರವಾದ ಕವಣೆಯಲ್ಲಿ ಕೂತಿದ್ದ ಇಬ್ರಾಹೀಮ್‌ರವರನ್ನು ಬಲವಾಗಿ ತೂಗಿ ಬೆಂಕಿಯ ಕುಂಡದಲ್ಲಿ ಎಸೆಯುತ್ತಾರೆ. ಜನರ ಕೇಕೆ ಹಾಹಾಕಾರ ಮುಗಿಲು ಮುಟ್ಟುತ್ತಿದೆ. ಎಲ್ಲರೂ ಕುಣಿದು ಕುಪ್ಪಳಿಸುತ್ತಿದ್ದಾರೆ. ಎಲ್ಲರ ಮುಖದಲ್ಲೂ ಹರ್ಷದ ಹೊನಲು, ಬೆಂಕಿಯಲ್ಲಿ ಬೆಂದು ಭಸ್ಮವಾದರೆಂದು ಜನರು ಸಂತೋಷಪಡುತ್ತಿದ್ದಾರೆ. ಆದರೆ ಅಲ್ಲಾಹನ ಆಜ್ಞೆ,

"ಓ ಅಗ್ನಿಯೇ! ನನ್ನ ಇಬ್ರಾಹೀಮ್‌ರವರನ್ನು(ಅ) ಸುಡಬೇಡ! ನೀನು ತಣ್ಣಗಾಗು! ಆತನನ್ನು ಸುರಕ್ಷಿತವಾಗಿಡು!" (ಕುರ್‌ಆನ್) ನೋಡ ನೋಡುತ್ತ ಇಬ್ರಾಹೀಮ್‌ರವರು(ಅ) ಬಿದ್ದ ಜಾಗದಲ್ಲಿ ಒಂದು ಸಣ್ಣ ಹೂದೋಟವಾಗುತ್ತದೆ. ಅವರ ಒಂದು ಕೂದಲೂ ಸಹ ಸುಟ್ಟಿರುವುದಿಲ್ಲ. ಈ ಕವಿವಾಣಿ ಅದೆಷ್ಟು ಸಮಂಜಸ...!

**"ಆಜ್ ಭಿಹೋ ಜೋ ಇಬ್ರಾಹೀಮ್ ಸಾ ಈಮಾನ್ ಪೈದಾ**
**ಆಗ್ ಕರ್‌ಸಕ್ತಿ ಹೈ ಅಂದಾಝೆ ಗುಲಿಸ್ತಾನ್ ಪೈದಾ"**

ಏಕದೇವ ವಿಶ್ವಾಸದಲ್ಲಿ ಮುಳುಗಿದ್ದ ಇಬ್ರಾಹೀಮ್‌ರವರು ಅಗ್ನಿಕುಂಡದಿಂದ ಎದ್ದು ಬರುವ ದೃಶ್ಯ ಅಲ್ಲಿ ನೆರೆದಿದ್ದವರೆಲ್ಲರ ಮನೋಬಲವನ್ನು ಕುಗ್ಗಿಸಿತ್ತು. ಈ ಅಸದೃಶ್ಯ ಪವಾಡವನ್ನು ನೋಡಿಯೂ ಸಹ ಜನರಲ್ಲಿ ನೈಜ ಜ್ಞಾನ ಮೂಡಲಿಲ್ಲ ಹಾಗೂ ಅವರ ಆದರ್ಶ ಗುಣಗಳ ಬಗ್ಗೆ ಯೋಚಿಸಲಿಲ್ಲ. ಬೇಸತ್ತ ಪ್ರವಾದಿ ಇಬ್ರಾಹೀಮ್‌ರವರು(ಅ) ಅಲ್ಲಿಂದ ಅವರೆಲ್ಲರನ್ನೂ ತೊರೆದು ವಿದಾಯ ಹೇಳುತ್ತಾರೆ.

"ಓ ಅಲ್ಲಾಹ್! ನಾನು ನಿನ್ನ ಮಾರ್ಗದಲ್ಲಿ ಹೊರಡುತ್ತೇನೆ" ಎಂದು ಅವರು ಇರಾಕಿನಿಂದ ಹೊರಡುತ್ತಾರೆ. **(ಕುರ್‌ಆನ್)**

ಅವರು ಮನಸ್ಸು ಮಾಡಿದ್ದರೆ ಅವರ ತಂದೆಯಂತೆ ದೊಡ್ಡ ಪುರೋಹಿತರಾಗಿ ರಾಜನ ಆಸ್ಥಾನದಲ್ಲಿ ಆಡಂಬರದ ಜೀವನ ಸಾಗಿಸಬಹುದಿತ್ತು. ಸುಖಭೋಗಗಳಲ್ಲಿ ಮೈಮರೆತು ಇಹಜೀವನವನ್ನು ಸಾಗಿಸಬಹುದಿತ್ತು. ಆದರೆ ಅವರಿಗೆ ಅದಾವುದೂ ಬೇಕಿರಲಿಲ್ಲ. ಏಕದೇವ ವಿಶ್ವಾಸ ಅವರ ಉಸಿರಾಗಿತ್ತು. ಅದನ್ನು ಅವರು ಚಾಚೂ ತಪ್ಪದೆ ನೆರವೇರಿಸುತ್ತಾ ಬಂದಿದ್ದರು. ಅವರು ಅವೆಲ್ಲವನ್ನೂ ತ್ಯಾಗ ಮಾಡಿ ಅಲ್ಲಾಹನ ಮಾರ್ಗದಲ್ಲಿ ಹೊರಡುತ್ತಾರೆ. ಇದು ಅವರ ಮೊದಲನೆಯ ಬಲಿದಾನ...! ಇಲ್ಲಿಂದ ಹೊಸ ಅಧ್ಯಾಯ ಪ್ರಾರಂಭವಾಗುತ್ತದೆ.

## ದೇವ ಮಾರ್ಗದಲ್ಲಿ ಪ್ರಯಾಣ

ಈ ಪ್ರವಾದಿ ಅಲ್ಲಾಹನ ಮಾರ್ಗದಲ್ಲಿ ತನ್ನ ಸರ್ವಸ್ವವನ್ನೂ ತೊರೆದು ಏಕೈಕನಾದ ಅಲ್ಲಾಹನನ್ನು ಸ್ಮರಿಸುತ್ತಾ ತನ್ನ ತಾಯ್ನಾಡನ್ನು ಬಿಟ್ಟು ಭಾರವಾದ ಹೆಜ್ಜೆಗಳನ್ನಿಡುತ್ತಾ ಮುಂದೆ ನಡೆಯುತ್ತಿದ್ದಾರೆ. ಉರ್ ಪಟ್ಟಣ... ತಾನು ಬೆಳೆದ, ಆಟವಾಡಿದ, ಸಕಲ ಮರ್ಯಾದೆಯಿಂದ ನಕ್ಕು ನಲಿದು ಬೆಳೆದಿದ್ದ ಪಟ್ಟಣ ದೂರವಾಗುತ್ತಿದೆ....! ಕಣ್ಣುಗಳು ತೇವಗೊಂಡಿವೆ....! ಆದರೂ ಇವರು ತಮ್ಮ ತಾಯ್ನಾಡನ್ನು ತೊರೆದು ಹೋಗುವ ದೃಶ್ಯ ಮನಕರಗುವಂತಿತ್ತು. ಸುತ್ತಲೂ ಮರಳುಗಾಡು. ಈ ಅಲ್ಲಾಹನ ಅತಿಥಿ ಆತನ ಸ್ತುತಿಯಲ್ಲಿ ಮುಂದುವರೆಯುತ್ತಾ ಸಿರಿಯಾ, ಅಬಿಸೀನಿಯಾ, ಜೋರ್ಡಾನ್, ಈಜಿಪ್ಟ್ ಮಾರ್ಗವಾಗಿ ಅರೇಬಿಯಾಕ್ಕೆ ಬರುತ್ತಾರೆ. ತಮ್ಮ ಜೀವನದ ಬಹುಭಾಗವನ್ನು ತಾವು ನಂಬಿದ್ದ ಏಕದೇವ ಸಿದ್ಧಾಂತವನ್ನು ಜನರಲ್ಲಿ ಪ್ರಚಾರ ಮಾಡುತ್ತಾರೆ. ಹಗಲೂ, ರಾತ್ರಿ ಬಿಡುವಿಲ್ಲದೆ ಜನರನ್ನು ಕಂಡಕಂಡಲ್ಲಿ ಎಚ್ಚರಿಸುತ್ತಾರೆ. ಮೂಢನಂಬಿಕೆ, ಬಹುದೇವಾರಾಧನೆ, ಕಳ್ಳತನ, ಸುಳ್ಳು ಹೇಳುವುದು ಇವುಗಳನ್ನು ಖಂಡಿಸಿ ಏಕದೇವನ ದಾಸರಾಗಬೇಕೆಂದು ಎಚ್ಚರಿಸುತ್ತಾರೆ. ಇಡೀ ಜೀವನವನ್ನು ಇದಕ್ಕಾಗಿ ಮುಡುಪಾಗಿಡುತ್ತಾರೆ. ಆದಿಮಾನವ ಹಾಗೂ ಪ್ರಥಮ ಪ್ರವಾದಿಯಾಗಿದ್ದ ಆದಮ್‌ರವರಿಂದ(ಅ) ಹಿಡಿದು ಒಂದು ಲಕ್ಷ 25 ಸಾವಿರ ಪ್ರವಾದಿಗಳು ಬಂದಿದ್ದು, ಎಲ್ಲರ ಮೂಲ ಉಪದೇಶ ಒಂದೇ ಆಗಿತ್ತು. "ಕೂಲೂ ಲಾ ಇಲಾಹ ಇಲ್ಲಲ್ಲಾಹ್ ತುಫ್ಲಿಹೂ" (ಹೇಳಿರಿ, ಅಲ್ಲಾಹನಲ್ಲದೆ ಅನ್ಯ ಆರಾಧ್ಯನಿಲ್ಲ. ನೀವು ಸಫಲರಾಗುವಿರಿ) ಎಂದು ಸಾರಿದ್ದರು. ಎಲ್ಲರೂ ಇಸ್ಲಾಮಿನ ಬಗ್ಗೆ ಹೇಳುತ್ತಿದ್ದರು.

ಇಬ್‌ರಾಹೀಮರ ಸಂಪ್ರದಾಯವನ್ನು ತಿರಸ್ಕರಿಸುವವನಾರು? ತನ್ನನ್ನು ತಾನೇ ಮೂರ್ಖತನದಲ್ಲಿ ಸಿಲುಕಿಸಿಕೊಂಡಾತನ ಹೊರತು ಬೇರಾರು ಹೀಗೆ ಮಾಡಬಲ್ಲರು? ಇಬ್‌ರಾಹೀಮರನ್ನು ಇಹಲೋಕದಲ್ಲಿ ನಮ್ಮ ಕಾರ್ಯಕ್ಕಾಗಿ ನಾವು ಆಯ್ಕೆ ಮಾಡಿಕೊಂಡಿದ್ದೆವು. ಪರದಲ್ಲಿ ಅವರು ಸಜ್ಜನರೊಂದಿಗೆ ಇರುವರು. ಅವರ ಪ್ರಭು ಅವರೊಡನೆ, 'ಮುಸ್ಲಿಮನಾಗು' ಎಂದಾಗ ಅವರು ತಕ್ಷಣ, ನಾನು ವಿಶ್ವದೊಡೆಯನ ಮುಸ್ಲಿಮನಾದೆನು ಎಂದರು. **(ಕುರ್‌ಆನ್, 2:130,131)**

"ಇಸ್ಲಾಮ್" ಇದು ಅರಬಿ ಪದ. ಇದರ ಅರ್ಥ ಬೇಷರತ್ತಾಗಿ ಅಲ್ಲಾಹನಲ್ಲಿ ತನ್ನ ಸರ್ವಸ್ವವನ್ನೂ ಅರ್ಪಿಸುವುದಾಗಿದೆ. ಸಮರ್ಪಣ ಮನೋಭಾವವೇ ಇಸ್ಲಾಮ್

ಬೋಧಿಸುವುದು. ಇದು "ಶರಣು" ಎಂಬ ಅರ್ಥದಂತಿದೆ. ಇಬ್ರಾಹೀಮರು ತಮ್ಮ ಆಯಷ್ಯವನ್ನೆಲ್ಲ ಈ ಕಾರ್ಯದಲ್ಲಿ ಸವೆಸಿದರು.

## ಸಂತಾನ ಭಾಗ್ಯಕ್ಕಾಗಿ ಪ್ರಾರ್ಥನೆ

ಈ ಪ್ರವಾದಿ ತನ್ನ ಇಡೀ ಜೀವನವನ್ನು ಅಲ್ಲಾಹನ ದಾಸ್ಯಾರಾಧನೆ, ಆತನ ತತ್ವಗಳನ್ನು ಇತರರಿಗೆ ತಿಳಿಸುವುದರಲ್ಲಿ ತೊಡಗುತ್ತಾರೆ. ಮುಪ್ಪು ಆವರಿಸುತ್ತದೆ. ಮಕ್ಕಳಿಲ್ಲ...! ನೊಂದ ಹೃದಯದಿಂದ ಒಂದು ದಿನ ದಯಾಮಯನಾದ ಅಲ್ಲಾಹನಲ್ಲಿ ಮೊರೆಯಿಡುತ್ತಾರೆ. ತಮ್ಮ ದುಃಖದ ಅಳಲನ್ನು ತೋಡಿಕೊಳ್ಳುತ್ತಾರೆ. "ಓ ಪ್ರಭು! ದಯಾಮಯ! ನನ್ನ ಆಯಸ್ಸು ಮುಗಿಯುತ್ತಾ ಇದೆ. ನನ್ನ ಈ ಕಾರ್ಯವನ್ನು ಮುಂದುವರಿಸಲು ನನಗೆ ಒಬ್ಬ ಸುಪುತ್ರನನ್ನು ದಯಪಾಲಿಸು. ನೀನು ಸರ್ವಶಕ್ತನು. ನನ್ನ ಈ ಪ್ರಾರ್ಥನೆಯನ್ನು ಸ್ವೀಕರಿಸು" ಎಂದು ಭಕ್ತಿಯಿಂದ ಬೇಡುತ್ತಾರೆ. ಈ ಪ್ರಾರ್ಥನೆಗೆ ಉತ್ತರವಾಗಿ ಅವರಿಗೆ ಒಬ್ಬ ಸಹನಶೀಲ ಪುತ್ರನ ಸುವಾರ್ತೆ ನೀಡಲಾಯಿತು. ಅಲ್ಲಾಹನ ಆಜ್ಞೆಯ ಪ್ರಕಾರ ಪ್ರವಾದಿಯವರ 90ನೇ ವಯಸ್ಸಿನಲ್ಲಿ ಒಂದು ಮಗುವಿನ ಜನನವಾಗುತ್ತದೆ. ಅವರೇ 'ಇಸ್ಮಾಈಲ್.' ತಂದೆ ತಾಯಿಯವರ ಆಶ್ರಯದಲ್ಲಿ ಆ ಮಗು ಬೆಳೆದು ದೊಡ್ಡದಾಗುತ್ತದೆ.

## ಅಲ್ಲಾಹನ ಆಜ್ಞೆಯ ಪಾಲನೆ

ಇಬ್ರಾಹೀಮ್‌ರವರಿಗೆ(ಅ) ಇಬ್ಬರು ಹೆಂಡಿರು. ಮೊದಲನೆಯವರು ಸಾರಾ(ಅ). ಅವರಿಗೆ ಮಕ್ಕಳಿಲ್ಲ. ಎರಡನೆಯ ಹೆಂಡತಿಯೇ ಹಾಜರ(ಅ). ಅವರಿಗೆ ಈಗ ಒಂದು ಗಂಡು ಮಗು ಆಗಿದೆ. ಪರೀಕ್ಷೆ ಮುಂದುವರಿಯುತ್ತದೆ. ಏಕೈಕ ಮಗನಾದ ಇಸ್ಮಾಈಲ್ ತಂದೆ ತಾಯಿಯವರ ಕಣ್ಮಣಿ. ಮಗುವಿನ ಮೇಲೆ ಅಗಾಧ ಪ್ರೇಮ. ಮುಪ್ಪಿನ ಊರುಗೋಲಾಗಿ ಮಗು ಬೆಳೆಯುತ್ತದೆ. ನಿರ್ಜನ ಪ್ರದೇಶದಲ್ಲಿ ತಾಯಿ-ಮಗನನ್ನು ಬಿಟ್ಟು ಬರಬೇಕೆಂಬ ಅಲ್ಲಾಹನ ಆಜ್ಞೆ...! ಪ್ರವಾದಿಯವರ ಹೃದಯ ಮರುಗುತ್ತದೆ. ತನ್ನ ಬಾಳಿನಲ್ಲಿ ಗತಿಸಿದ ತ್ಯಾಗ ಬಲಿದಾನದ ಅವ್ಯಕ್ತ ಭಾವನೆಯತ್ತ ದೃಷ್ಟಿ ಹಾಯಿಸುತ್ತಾರೆ. ತಂದೆ-ತಾಯಿ, ಬಂಧು-ಬಳಗ ಹಾಗೂ ತಾಯ್ನಾಡನ್ನು ತೊರೆದು ಒಬ್ಬಂಟಿಗರಾಗಿ ಊರೂರು ಅಲೆದು ತನ್ನ ಜೀವಿತದ ಕೊನೆಯ ಗಳಿಗೆಯಲ್ಲಿ ನಿಂತಿರುವ ಈ ಕರ್ಮಯೋಗಿ ತನ್ನ ಜೀವನದುದ್ದಕ್ಕೂ ತ್ಯಾಗಿಯಾಗಿಯೇ ಮುಂದುವರಿದಿದ್ದಾರೆ. ಅಲ್ಲಾಹನ ಆಜ್ಞೆಯನ್ನು ಶಿರಸಾವಹಿಸಿ ಪಾಲಿಸುತ್ತಿದ್ದಾರೆ. ಈ ಧೀಮಂತ ವ್ಯಕ್ತಿಯ ಅಚಲ ವಿಶ್ವಾಸದ ಮುಂದೆ ಈಗ ಬಂದಿರುವ ಕಠಿಣ ಸಮಸ್ಯೆ....! ತಾಯಿ-ಮಗುವನ್ನು ನಿರ್ಜನ ಪ್ರದೇಶದಲ್ಲಿ ಬಿಟ್ಟು ಬರಬೇಕು. ಅವರ ಮೃದು ಹೃದಯ ಅದೆಷ್ಟು ಕಂಪಿಸಿರಬಹುದು...! ಈ ಕಾರ್ಯಕ್ಕೆ ಅವರು ಅದೆಷ್ಟು ಸಿದ್ಧರಾಗಬೇಕು...! ಧೃತಿಗಡೆದ ಈ ಮಹಾಚೇತನ! ಈ ಕಾರ್ಯಕ್ಕೂ ಸಿದ್ಧರಾಗುತ್ತಾರೆ.

ಇತಿಹಾಸ ಎಚ್ಚೆತ್ತು ಪರಿಸ್ಥಿತಿಯನ್ನು ಕೇಳುತ್ತದೆ...! "ಏನಾಯಿತು..." "ನೀನು ನೋಡುತ್ತಿಲ್ಲವೇ? ಅದೋ ನೋಡು ಪ್ರವಾದಿ ಇಬ್ರಾಹೀಮ್‌ರವರು ಒಂಟೆಯ ಮೇಲೆ ಹೋಗುತ್ತಿದ್ದಾರೆ. ಅವರ ಹಿಂದೆ ಅವರ ಮಡದಿ-ಮಗು ಇದ್ದಾರೆ. ಜೊತೆಗೆ ಒಂದು

ಚರ್ಮದ ಚೀಲದಲ್ಲಿ ಸ್ವಲ್ಪ ಖರ್ಜೂರ. ಇನ್ನೊಂದು ಚೀಲದಲ್ಲಿ ಸ್ವಲ್ಪ ನೀರು. ಹೋಗುವ ದೃಶ್ಯ...! ಸುತ್ತಲೂ ಮೌನ! ಮಡದಿಗೆ ಗೊತ್ತಿಲ್ಲ ಎಲ್ಲಿಗೆ ಹೋಗುವುದು. ಪತಿಯನ್ನು ಹಿಂಬಾಲಿಸುತ್ತಿರುವ ಆ ಮಹಾ ಸಾಧ್ವಿಮಣಿ..... ಮೌನವಾಗಿದ್ದಾರೆ....! ಪ್ರವಾದಿಯವರಿಗೆ ಮೈಮನದಲ್ಲಿ ತುಂಬಿರುವ ದುಃಖ, ಯಾರ ಮುಂದೆಯೂ ಹೇಳುವಂತಿಲ್ಲ. ಹಾಜರಾರವರು ಆದರ್ಶ ಪತ್ನಿಯಾಗಿ ಮಮತೆಯ ತಾಯಿಯಾಗಿ, ಕರ್ಮಯೋಗಿಯ ಬಾಳ ಸಂಗಾತಿಯಾಗಿ ಜಗತ್ತಿನ ಇತಿಹಾಸದಲ್ಲಿ ಹೊಸ ಅಧ್ಯಾಯ ಬರೆಯಲು ಹೊರಟಿದ್ದಾರೆ. ಜಗತ್ತಿನ ಚರಾಚರ ವಸ್ತುಗಳು ವಿಸ್ಮಯದಿಂದ ಈ ದೃಶ್ಯ ನೋಡುತ್ತಿವೆ. ಹಿಂದೆಂದೂ ಇಂತಹ ದೃಶ್ಯ ಕಂಡಿಲ್ಲ...!

ಅದೋ ಎತ್ತರದ ದಿಣ್ಣೆ....! ಮಕ್ಕಾದ ಕಣಿವೆಯಲ್ಲಿ....! ಕಲ್ಲು ಬಂಡೆಗಳ ಬಂಜರು ನೆಲ...! ಗಿಡಗಳಾಗಲಿ, ಹುಲ್ಲಾಗಲಿ ಬೆಳೆಯದೆ ಇರುವ ಮರಳುಗಾಡು.... ಇದೇ ಪ್ರದೇಶದಲ್ಲಿ ಪರೀಕ್ಷೆ ನಡೆಯಲಿದೆ! ಪ್ರವಾದಿಯವರಿಗೆ ದುಃಖ ಉಮ್ಮಳಿಸುತ್ತಿದೆ. ಆದರೆ ಗೋಚರಿಸುತ್ತಿಲ್ಲ. ಮಮತೆಯ ಮಡದಿ ಹಾಗೂ ಎಳೆಯ ಮಗುವನ್ನು ಅಲ್ಲಿ ಇಳಿಸುತ್ತಾರೆ. ಕೇವಲ ಸ್ವಲ್ಪ ಖರ್ಜೂರ ಹಾಗೂ ನೀರು ಜೀವನಾಧಾರ...! ಅಲ್ಲಿ ನಿಲ್ಲದೆ ಇಬ್ರಾಹೀಮ್‌ರವರು ಪುನಃ ಒಂಟೆಯನ್ನೇರಿ ತಿರುಗಿ ನೋಡದೆ ಪ್ರಯಾಣಿಸುತ್ತಾರೆ. ಇದೆಂತಹ ವಿಚಿತ್ರ ವರ್ತನೆ! ಹಾಜರಾರವರು(ಅ) ಚಕಿತರಾಗಿ ಒಂಟೆಯನ್ನು ಹಿಂಬಾಲಿಸುತ್ತಾರೆ.

"ನೀವು ನನ್ನನ್ನು ಹಾಗೂ ಮಗುವನ್ನು ಈ ನಿರ್ಜನ ಪ್ರದೇಶದಲ್ಲಿ ಬಿಟ್ಟು ಹೋಗುವಿರೇಕೆ? ನನ್ನ ಯಜಮಾನರೇ! ತಾವು ನನ್ನನ್ನು ಈ ಮರುಭೂಮಿಯಲ್ಲಿ ಯಾರ ಆಶ್ರಯದಲ್ಲಿ ಬಿಟ್ಟು ಹೋಗುತ್ತಿರುವಿರಿ?" ಇಬ್ರಾಹೀಮ್‌ರವರಿಂದ(ಅ) ಉತ್ತರವಿಲ್ಲ. ಆಗ ಹಾಜರರವರು(ಅ),

"ಇದೇನು ಅಲ್ಲಾಹನ ಆಜ್ಞೆಯೇ?" ಎಂದಾಗ ಪ್ರವಾದಿಯವರು,

"ಹೌದು! ಭೂಮಿ-ಆಕಾಶಗಳ ಸೃಷ್ಟಿಕರ್ತನಾದ ಅಲ್ಲಾಹನ ಆಶ್ರಯದಲ್ಲಿ ಆತನ ಆಜ್ಞೆಯ ಮೇರೆಗೆ ನಾನು ನಿಮ್ಮನ್ನು ಇಲ್ಲಿ ಬಿಟ್ಟು ಹೋಗುತ್ತಿರುವೆನು" ಎಂದಾಗ ಆ ತ್ಯಾಗಮಯಿ ತಾಯಿಯು,

"ಅಲ್ಲಾಹನು ಸರ್ವಶಕ್ತನು. ಅವನು ಖಂಡಿತ ನಮ್ಮನ್ನು ರಕ್ಷಿಸುವನು. ನಾವು ಅವನ ವಿಧಿಯ ಮುಂದೆ ಶಿರ ಬಾಗುತ್ತೇವೆ. ಆತನ ರಕ್ಷಣೆಯೇ ಸಾಕು" ಎಂದುತ್ತರಿಸಿ ತನ್ನ ಕಂದನನ್ನು ಎದೆಗಪ್ಪಿಕೊಂಡು ಆ ನಿರ್ಜನ ಪ್ರದೇಶದಲ್ಲಿ ಒಂಟಿಯಾಗಿ ನಿಲ್ಲುತ್ತಾರೆ. ಇದರಿಂದ ಹಾಜರಾರವರ ಅತ್ಯುನ್ನತ ಧರ್ಮನಿಷ್ಠೆ ಹಾಗೂ ಅಲ್ಲಾಹನ ಮೇಲಿನ ಅಗಾಧ ಭರವಸೆಯ ಅಂಶ ವ್ಯಕ್ತವಾಗುತ್ತದೆ!

ಈ ಸಂದರ್ಭದಲ್ಲಿ ನಾವು ಇಬ್ರಾಹೀಮ್‌ರವರ(ಅ) ಈ ತ್ಯಾಗಕ್ಕೆ ಸರಿಯಾಗಿ ವಿವೇಚಿಸಬೇಕಾಗಿದೆ. ಒಬ್ಬ ಪ್ರವಾದಿ ಹಾಗೂ ಅಲ್ಲಾಹನ ಮಾರ್ಗದಲ್ಲಿ ತನ್ನ ತನು-ಮನ-

ಧನಗಳನ್ನೆಲ್ಲಾ ತ್ಯಾಗ ಮಾಡುತ್ತಿರುವ ಈ ಕರ್ಮಯೋಗಿ ಮುಪ್ಪಿನಲ್ಲಿ ಜನಿಸಿದ ಏಕೈಕ ಪುತ್ರನನ್ನು ಹಾಗೂ ಅಬಲೆಯಾದ ಪತ್ನಿಯನ್ನು ನೀರಿಲ್ಲದ, ನೆರಳಿಲ್ಲದ, ನಿರ್ಜನ ಪ್ರದೇಶದಲ್ಲಿ ಬಿಟ್ಟು ಹೋಗುವಷ್ಟು ಕ್ರೂರಿಗಳಾಗಿದ್ದರೆ? ಅವರಲ್ಲಿ ಅನುಕಂಪ, ದಯೆ ಇರಲಿಲ್ಲವೇ? ಇದು ಸಹಜ ಪ್ರತಿಕ್ರಿಯೆ! ಅವರಲ್ಲಿಯೂ ಸಹ ಮಾನವ ಸಹಜ ಮಮತೆ, ವಾತ್ಸಲ್ಯ ಮನೆ ಮಾಡಿತ್ತು. ಆದರೆ ಅಲ್ಲಾಹನ ಆಜ್ಞೆಗೆ ಶಿರಬಾಗಲೇ ಬೇಕಿತ್ತು.

ಒಂಟೆಯನ್ನೇರಿ ಹೋಗುವಾಗ ಹಿಂತಿರುಗಿ ನೋಡಲಾರದಷ್ಟು ಅವರ ಮನಸ್ಸು ಕಠೋರವಾಗಿತ್ತೇ? ಅವರು ಅಷ್ಟು ಕ್ರೂರಿಗಳೇ? ಮೊದಲಾದ ಪ್ರಶ್ನೆಗಳು ಹುಟ್ಟುತ್ತವೆ. ಆದರೆ ಇಲ್ಲಿ ಅಡಗಿರುವ ಸತ್ಯಾಂಶವೇ ಬೇರೆ...! ಮಗುವನ್ನು ನೋಡಲಾರದೆ ಹಾಗೆಯೇ ಹೋಗುವಾಗ ಅವರಿಗೆ ಅದೆಷ್ಟು ದುಃಖ ಉಮ್ಮಳಿಸಿರಬಹುದು? ಪುಟ್ಟ ಕಂದನನ್ನು ನೋಡಿದ್ದರೆ ದುಃಖದ ಭರದಲ್ಲಿ ಅವರು ಆ ಕಾರ್ಯ ಮಾಡದಂತಾಗಬಹುದೆಂಬ ಭೀತಿಯಿಂದ ತಾಯಿ-ಮಗನನ್ನು ನೋಡದೆ ಪ್ರಯಾಣ ಮಾಡುತ್ತಾರೆ. ಇದನ್ನೇ ತಪ್ಪಾಗಿ ಯಹೂದಿ ವಿದ್ವಾಂಸರು ತಿರುಚಿ ಬರೆದಿದ್ದಾರೆ. ಅವರ ಗ್ರಂಥಗಳಲ್ಲಿ ಹೀಗೆ ಬರೆದು ಇಬ್ರಾಹೀಮ್‌ರವರನ್ನು(ಅ) ಹೀಗಳೆದಿದ್ದಾರೆ.

ಇಬ್ರಾಹೀಮ್‌ರವರಿಗೆ ಇಬ್ಬರು ಪತ್ನಿಯರು. ಮೊದಲನೆಯವರು ಸಾರಾ(ಅ). ಎರಡನೆಯವರು ಹಾಜರಾ(ಅ). ಹಿರಿಯ ಹೆಂಡತಿಗೆ ಮಕ್ಕಳಿಲ್ಲ. ಕಿರಿಯ ಹೆಂಡತಿಗೆ ಗಂಡು ಮಗುವಾದಾಗ ಸಹಜವಾಗಿ ಸವತಿ ಮತ್ಸರದಿಂದ ಸಾರಾರವರು(ಅ) ತನ್ನ ಸವತಿಯಾದ ಹಾಜರಾರವರನ್ನು(ಅ) ಹಾಗೂ ಮಗುವನ್ನು ನಿರ್ಜನ ಪ್ರದೇಶದಲ್ಲಿ ಬಿಟ್ಟು ಬರುವಂತೆ ಗಂಡನಿಗೆ ಆಜ್ಞಾಪಿಸುತ್ತಾರೆ. ಆಗ ಇಬ್ರಾಹೀಮ್‌ರವರು(ಅ) ಅವರ ಮಾತನ್ನು ಕೇಳಿ ತಾಯಿ ಮಗುವನ್ನು ಬಿಟ್ಟು ಬಂದರೆಂಬ ಉಲ್ಲೇಖ ಇದೆ. ಇದು ನಿಜಕ್ಕೂ ತಪ್ಪಾಗಿದೆ. ಒಬ್ಬ ಪ್ರವಾದಿ ಹಾಗೂ ತ್ಯಾಗಮಯಿಯಾದ ಇಬ್ರಾಹೀಮ್‌ರವರು ಇಂತಹ ಕೀಳು ಮಟ್ಟದ ಕೆಲಸ ಮಾಡಲಾರರು ಎಂಬುದನ್ನು ನಾವು ಅರಿಯಬೇಕಾಗಿದೆ. ಇದೇ ರೀತಿ ಆದಿಮಾನವ ಆದಮ್‌ರ(ಅ) ಬಗ್ಗೆಯೂ ಸಲ್ಲದ ಆರೋಪ ಹೊರಿಸಿದ್ದಾರೆ. ಸೈತಾನನ ಪ್ರೇರಣೆಗೆ ಒಳಗಾಗಿ ಆದಮ್ ಮತ್ತು ಹವ್ವಾ ಇಬ್ಬರೂ ಮರದ ಹಣ್ಣನ್ನು ತಿಂದರೆಂದು ಕುರ್‌ಆನ್ ಉಲ್ಲೇಖಿಸಿದೆ. ಆದರೆ ಯಹೂದಿ ಪಂಡಿತರು ಹವ್ವಾರವರನ್ನು ಅತ್ಯಂತ ಕೀಳುಮಟ್ಟಕ್ಕೆ ನೂಕುತ್ತಾ, ಸ್ತ್ರೀ ಕೆಟ್ಟವಳು, ಅವಳು ನಂಬಿಕೆಗೆ ಅರ್ಹಳಲ್ಲ. ಅವಳ ಪ್ರಭಾವದಿಂದಲೇ ಆದಮ್‌ರವರು(ಅ) ಅವಳ ಪ್ರಚೋದನೆಗೊಳಗಾಗಿ ಮರದ ಹಣ್ಣನ್ನು ತಿಂದರು. ಇದಕ್ಕೆಲ್ಲಾ ಕಾರಣ ಒಬ್ಬ ಸ್ತ್ರೀ ಎಂದು ಅವರ ಬಗ್ಗೆ ಇಲ್ಲ ಸಲ್ಲದ ಅಪಚಾರವನ್ನು ಬರೆದಿರುವರು. ಈ ಆರೋಪ ಅಸಮಂಜಸ.

## ಹಾಜರಾರ(ಅ) ನಿರ್ಭೀತಿ

ಇಬ್ರಾಹೀಮ್‌ರವರು(ಅ) ಅಲ್ಲಾಹನ ಆಜ್ಞೆ ಪ್ರಕಾರ ತಾಯಿ ಮಗನನ್ನು ನಿರ್ಜನ ಪ್ರದೇಶದಲ್ಲಿ ಬಿಟ್ಟು ಬಂದಾಗ, ಆ ಅಬಲೆ ತಾಯಿ ತನ್ನ ಕರುಳ ಕುಡಿಯನ್ನು ಎದೆಗಪ್ಪಿಕೊಂಡು,

ನಿರ್ಜನವಾದ ಭೀಕರ ಮರುಭೂಮಿಯಲ್ಲಿ ಒಂಟಿಯಾಗಿರಲು ಭಯ ಹುಟ್ಟಿಸುವ ರಾತ್ರಿಗಳನ್ನೂ ದರೋಡೆಕೋರರನ್ನೂ, ಕ್ರೂರ ಮೃಗಗಳನ್ನೂ ಲೆಕ್ಕಿಸದೆ ಶಾಂತಿ ಮತ್ತು ಭದ್ರತೆಯ ಪ್ರಜ್ಞೆಯಿಂದ ನೆಮ್ಮದಿಯಿಂದಿರಲು ಓರ್ವ ತಾಯಿಗೆ ಸಾಧ್ಯವಾಗುವುದು. ಅಲ್ಲಾಹನಲ್ಲಿ ದೃಢವಿಶ್ವಾಸವಿರಿಸಿ, ಅಲ್ಲಾಹನಲ್ಲಿ ಭರವಸೆ ಇರಿಸಿ ಆತನ ಎಲ್ಲ ನಿರ್ಣಯಗಳಲ್ಲಿ ಸಂತೃಪ್ತಿ ಹೊಂದುವುದೆಂಬ ಈ ನಂಬಿಕೆಯೇ ದಾಸ್ಯತನದ ನೈಜ ವಿಧಾನವಾಗಿದೆ. ಇದರಲ್ಲಿ ಹಾಜರಾರವರು(ಅ) ಪರಿಪೂರ್ಣಗೊಂಡರು. ಸ್ವಲ್ಪ ನೀರು ಮತ್ತು ಖರ್ಜೂರಕ್ಕೆ ಸೀಮಿತವಾದ ಲೌಕಿಕ ಸೌಲಭ್ಯ ಹೊಂದಿಕೊಂಡು ಅಪಾರ ನಂಬಿಕೆಯಿಂದ ದಿನದೂಡಿದ ಹಾಜರಾರವರ ಜೀವನದ ಪ್ರತಿಯೊಂದು ಅಂಶವೂ ಪ್ರಶಂಸನೀಯವಾಗಿದೆ...! ಅವರು ಮಾನವಕುಲದ ಪ್ರತೀಕ ವಾಗಿದ್ದರು. ಪ್ರೀತಿಯ ಪರಮಪ್ರತೀಕ...! ಅಲ್ಲಾಹನೊಂದಿಗೆ ಅತಿ ಪ್ರೀತಿಯಿಂದಾಗಿ ಅವರು ಈ ಆಜ್ಞೆಯನ್ನು ಪಾಲಿಸಲು ಅನುವಾದರು. ಈ ನಿರ್ಣಯ ನಿಜಕ್ಕೂ ನಡುಕ ಹುಟ್ಟಿಸುವಂತಹ ದ್ದಾಗಿತ್ತು. ಏಕಾಂಗಿಯಾದ ಓರ್ವ ಮಹಿಳೆ ಮತ್ತು ಎಳೆ ಮಗು ಭಯಾನಕ ಮತ್ತು ನಿರ್ಜನ ಕಣಿವೆಯಲ್ಲಿ ಎಸೆಯಲ್ಪಡುತ್ತಾರೆ. ಕುಡಿಯಲು ನೀರಿಲ್ಲ, ಸೂರಿಲ್ಲ, ಯಾರೂ ಸಹಾಯಕ್ಕೂ ಇಲ್ಲ! ಯಾಕೆ ಈ ನಿರ್ಧಾರ! ಅಲ್ಲಾಹನಿಗೆ ಕೇವಲ ಆತನೊಬ್ಬನನ್ನೇ ಅವಲಂಬಿಸಬೇಕಾಗಿತ್ತು. ಈ ತರ್ಕ ಅಷ್ಟೊಂದು ಸರಳವಾದುದಲ್ಲ....! ಆದರೂ ಸಹ ಹಾಜರಾರವರು ಇದರಲ್ಲಿ ಉತ್ತೀರ್ಣರಾದರು. ಎಲ್ಲಾ ಬಗೆಯ ಭಯಾಶಂಕೆಗಳನ್ನು ಅನುಭವಿಸಿ ದೇವಾನುಸರಣೆಯ ಹಾದಿಯಲ್ಲಿ ನಡೆಯುವುದು ದಾರ್ಶನಿಕ ಹಾಗೂ ಬೌದ್ಧಿಕ ಧೋರಣೆಯೆಂದು ವ್ಯಕ್ತವಾಗುತ್ತದೆ. ಇಬ್ರಾಹೀಮ್(ಅ) ಮತ್ತು ಹಾಜರಾ(ಅ) ಕೇವಲ ಅಲ್ಲಾಹನ ಸಂಪ್ರೀತಿಗಾಗಿಯೇ ಜೀವಿಸಿದ್ದರೆಂಬುದು ಇದರಿಂದ ವ್ಯಕ್ತವಾಗುತ್ತದೆ. ಸಹನೆಯ ಸಾಕಾರಮೂರ್ತಿ. ಹಾಜರಾ ರವರ(ಅ) ಮೇಲೆ ಅಲ್ಲಾಹನ ಅಪಾರ ಅನುಗ್ರಹಗಳು ಸದಾ ಸುರಿಯುತ್ತಲಿರಲಿ...!

## ಝಮ್ ಝಮ್

ದಿನಗಳುರುಳಿದುವು. ತಂದಿದ್ದ ಸ್ವಲ್ಪ ನೀರೂ ಖರ್ಜೂರವೂ ಬರಿದಾಗುತ್ತಾ ಬರುತ್ತಿದೆ. ಅಲ್ಲಿ ಎಲ್ಲಿಯೂ ನೀರಿನ ಸುಳಿವಿಲ್ಲ. ಅನ್ನ ನೀರಿಲ್ಲದೆ ಅನೇಕ ದಿನಗಳು ಗತಿಸಿದವು. ಹಸಿವು ಬಾಯಾರಿಕೆ ಅತಿಯಾಗಿ ಎದೆ ಹಾಲೂ ಸಹ ಬತ್ತಿ ಹೋಗಿದೆ. ಮಗುವಿನ ಸ್ಥಿತಿ ಚಿಂತಾಜನಕವಾಗಿದೆ. ತಾಯಿಯ ಮಮತೆ ಆ ಮಗುವಿನ ಸ್ಥಿತಿ ನೋಡಲಾಗುತ್ತಿಲ್ಲ. ಅವರು ಕೂತಿದ್ದ ಆ ದಿಣ್ಣೆಯ ಪಕ್ಕದಲ್ಲೇ ಮಗುವನ್ನು ಮಲಗಿಸಿ, ನೀರಿಗಾಗಿ ಹುಡುಕಾಡಲು ಪ್ರಯತ್ನಿಸುತ್ತಾರೆ. ಹತ್ತಿರವಿದ್ದ 'ಸಫಾ' ಮತ್ತು 'ಮರ್ವಾ' ಬೆಟ್ಟಗಳನ್ನೇರಿ ದೂರದಲ್ಲಿ ಎಲ್ಲಿಯಾದರೂ ನೀರು ಸಿಗಬಹುದೆಂದು ಅತ್ಯಂತ ಆತುರದಿಂದ ನೋಡುತ್ತಾರೆ. ಮಮತೆಯ ತಾಯಿ! ನಿರಂತರ ಓಡಾಡುತ್ತಿದ್ದಾರೆ. ಸಫಾದಿಂದ ಮರ್ವಾ ಹಾಗೂ ಮರ್ವಾದಿಂದ ಸಫಾದೆಡೆಗೆ ಈ ಓಡಾಟ...! ಮಗುವಿನ ಆಕ್ರಂದನ....! ಅಲೆದಾಟದಿಂದ ತುಂಬಾ ಬಳಲಿದ್ದಾರೆ....! ಬಿಕ್ಕಿ ಬಿಕ್ಕಿ ಅಳುತ್ತಿದ್ದಾರೆ...! ಈ ದೃಶ್ಯ ಅತ್ಯಂತ ಮನ ಕಲಕುವಂತಹ ದ್ದಾಗಿತ್ತು! ತಿರುಗಿ ನೋಡುತ್ತಾರೆ. ಮಗುವಿನ ಬಳಿ ಯಾರೋ ನಿಂತಂತೆ ಭಾಸವಾಗುತ್ತದೆ.

ಭಯಭೀತರಾಗಿ ಓಡೋಡಿ ಮಗುವಿನ ಬಳಿ ಬರುತ್ತಾರೆ. ನೋಡುವುದೇನು! ಮಗುವಿನ ಪಾದಗಳ ಬಳಿ ನೀರು ಚಿಮ್ಮುತ್ತಿದೆ. ತೇವಗೊಂಡ ಕಣ್ಣುಗಳಲ್ಲಿ ಹರ್ಷದ ಹೊನಲು. ಮಗುವನ್ನು ಎದೆಗಪ್ಪಿಕೊಂಡು ನೀರು ನಿಲ್ಲುವಂತೆ ಮರಳಿನ ಕಟ್ಟೆ ಕಟ್ಟುತ್ತಾರೆ. ನೀರು ನಿಲ್ಲದೆ ಚಿಲುಮೆ ಉಕ್ಕುತ್ತಿದೆ. ಮರಳ ದಿಣ್ಣೆ ಎತ್ತರಿಸುತ್ತಾ "ಝಮ್! ಝಮ್!" (ನಿಲ್ಲು ನಿಲ್ಲು) ಎಂದು ಹೇಳುತ್ತಾರೆ. ನೀರು ಮರಳಿನ ಕಟ್ಟೆಯಲ್ಲಿ ನಿಲ್ಲುತ್ತದೆ. ತಣ್ಣನೆಯ ಸಿಹಿನೀರು...! ಅವರಿಗಾದ ಆನಂದ ಅಷ್ಟಿಷ್ಟಲ್ಲ. ತಾವೂ ಕುಡಿದು ಮಗುವಿಗೂ ಕುಡಿಸುತ್ತಾರೆ. ಅಲ್ಲಾಹನ ಅಪಾರ ಅನುಗ್ರಹಕ್ಕಾಗಿ ಆತನಲ್ಲಿ ಪ್ರಾರ್ಥಿಸುತ್ತಾರೆ. ಆ ನೀರು ಅವರ ಹಸಿವು ಮತ್ತು ಬಾಯಾರಿಕೆಯನ್ನು ನೀಗಿಸುತ್ತದೆ. "ಝಮ್ ಝಮ್" ನೀರು ಅತ್ಯಂತ ಪರಿಶುದ್ಧವಾದುದು. ಇಂತಹ ಪರಿಶುದ್ಧ ನೀರು ಜಗತ್ತಿನಲ್ಲಿ ಬೇರೊಂದಿಲ್ಲ. 4000 ವರ್ಷಗಳಿಂದಲೂ ಈ ನೀರು ಲಕ್ಷಾಂತರ ಜನರ ದಾಹವನ್ನು ನೀಗಿಸುತ್ತಿದೆ. ಪ್ರತೀವರ್ಷ ಮಕ್ಕಾಕ್ಕೆ ಹೋಗುವ 30-40 ಲಕ್ಷ ಯಾತ್ರಿಕರು ಈ ನೀರನ್ನು ಕುಡಿದು ಮನೆಗಳಿಗೂ ತರುತ್ತಾರೆ. ಆದರೂ ಸಹ ಈ ನೀರಿನ ಚಿಲುಮೆ ಬತ್ತಿಲ್ಲ. ತಿಂಗಳುಗಟ್ಟಲೆ ಈ ನೀರನ್ನು ಶೇಖರಿಸಲ್ಪಟ್ಟರೂ ಸಹ ಕೆಡುವುದಿಲ್ಲ. ಇಂತಹ ನೀರಿನ ಉಗಮಕ್ಕೆ ಕಾರಣರಾದ ತ್ಯಾಗಮಯಿ ಹಾಜರಾ ಹಾಗೂ ಇಸ್ಮಾಈಲ್‌ರವರು ಅದೆಷ್ಟು ಧನ್ಯರು...!

ಈ ನೀರಿನಿಂದಾಗಿ ತಾಯಿ-ಮಗ ನೆಮ್ಮದಿಯಿಂದ ಇರತೊಡಗಿದರು. ಸದಾ ಕಾಲ ಅಲ್ಲಾಹನ ಸ್ತುತಿಗೈಯುತ್ತ ಕಾಲ ಕಳೆಯತೊಡಗಿದರು. ಒಮ್ಮೆ ಪ್ರಯಾಣಿಕರ ತಂಡವೊಂದು ಅತ್ತ ಕಡೆಯಿಂದ ಸಾಗುತ್ತಿರುವಾಗ ದೂರದಿಂದ ಪಕ್ಷಿಗಳ ಹಾರಾಟ ನೋಡಿ ಅಲ್ಲಿ ನೀರಿರಬಹುದೆಂದು ತಿಳಿದು ಪ್ರಯಾಣಿಕರು ಅತ್ತ ಕಡೆ ಬರುತ್ತಾರೆ. ನೋಡುವುದೇನು? ಅಲ್ಲಿ ಒಂದು ನೀರಿನ ಚಿಲುಮೆ. ಅದರ ಹತ್ತಿರ ತಾಯಿ-ಮಗ ಕುಳಿತಿರುವುದು ಗೋಚರಿಸುತ್ತದೆ. ಹಾಜರಾರವರ ಅನುಮತಿ ಪಡೆದು ಪ್ರಯಾಣಿಕರು ಅಲ್ಲಿ ಬಿಡಾರ ಹೂಡುತ್ತಾರೆ. ಕ್ರಮೇಣ ಜನರು ಅಲ್ಲಿ ನೆಲೆಸತೊಡಗುತ್ತಾರೆ. ಇದೇ ಮುಂದೆ ಮಕ್ಕಾ ನಗರವಾಯಿತು.

ಇಬ್ರಾಹೀಮ್‌ರವರು(ಅ) ಆಗಾಗ್ಗೆ ಬಂದು ತಮ್ಮ ಮಡದಿ ಹಾಗೂ ಮಗುವನ್ನು ನೋಡಿಕೊಂಡು ಹೋಗುತ್ತಿದ್ದರು. ಈಗ ಬಂದಾಗ ಪರಿಸ್ಥಿತಿ ಬದಲಾಗಿರುತ್ತದೆ. ನೀರಿನ ಚಿಲುಮೆ ಹಾಗೂ ಜನರು ನೆಲೆಸಿರುವುದು ಕಂಡು ಇಬ್ರಾಹೀಮ್‌ರವರಿಗೆ ಆನಂದವಾಗುತ್ತದೆ.

## ನಿಲ್ಲದ ಪರೀಕ್ಷೆ

ಜೀವನದುದ್ದಕ್ಕೂ ತ್ಯಾಗ ಬಲಿದಾನದ ಪರೀಕ್ಷೆಯಲ್ಲಿದ್ದ ಪ್ರವಾದಿ ಇಬ್ರಾಹೀಮ್‌ರವರಿಗೆ(ಅ) ಮತ್ತೊಂದು ಪರೀಕ್ಷೆ ಕಾದಿರುತ್ತದೆ. ನೆಮ್ಮದಿಯ ಉಸಿರು ಬಿಡುವಾಗಲೇ ಬರುತ್ತಿರುವ ಪರೀಕ್ಷೆ. ಅದು ಅತ್ಯಂತ ಕಠಿಣವಾಗಿತ್ತು. ಅವರು ಏನೆಲ್ಲಾ ಪ್ರೀತಿಸುತ್ತಿದ್ದರೋ ಅವುಗಳೆಲ್ಲವನ್ನೂ ತ್ಯಾಗ ಮಾಡುವ ಬಲವಾದ ಪರೀಕ್ಷೆ ಕಾದಿತ್ತು. ಒಂದು ದಿನ ಕನಸಿನಲ್ಲಿ ತಮ್ಮ ಕರುಳ ಕುಡಿ ಇಸ್ಮಾಈಲ್‌ರನ್ನು ಬಲಿ ಕೊಡುತ್ತಿದ್ದಾರೆ.

ಈ ದೃಶ್ಯ ಅವರನ್ನು ಚಿಂತೆಗೀಡು ಮಾಡಿತು. ಕಾರಣ ಪ್ರವಾದಿಗಳ ಕನಸು ನೈಜವಾದುದು. ಅದನ್ನು ಪಾಲಿಸಬೇಕಾಗುತ್ತದೆ. ಎಂತಹ ಕಠಿಣ ಪರೀಕ್ಷೆ....! ಮುಪ್ಪಿನ ಊರುಗೋಲಾಗಿದ್ದ... ಕರುಳ ಕುಡಿಯನ್ನು ಬಲಿ ಕೊಡುವುದು!

ಇಬ್ರಾಹೀಮ್‌ರವರು(ಅ) ಮಾರನೆಯ ದಿನ ಅನೇಕ ಒಂಟೆಗಳನ್ನು ಬಲಿ ಕೊಡುತ್ತಾರೆ. ಆದರೆ ಪುನಃ ಕನಸಿನಲ್ಲಿ ಅದೇ ದೃಶ್ಯ....! ಇಸ್ಮಾಈಲ್‌ರ ಬಲಿದಾನ! ಮಾರನೆಯ ದಿನವೂ ಸಹ ಅನೇಕ ಒಂಟೆಗಳನ್ನು ಬಲಿ ಕೊಡುತ್ತಾರೆ. ಅಲ್ಲಾಹನಿಗೆ ಒಂಟೆಗಳ ಬಲಿ ಬೇಕಿಲ್ಲ, ಮಗನ ಬಲಿಬೇಕು...! ಪುನಃ ಕನಸಿನಲ್ಲಿ ಅದೇ ದೃಶ್ಯ....! ಅಲ್ಲಾಹನ ಆಜ್ಞೆ! ಮನಸ್ಸು ಹೊಯ್ದಾಡುತ್ತದೆ. ಮಡದಿ ಮಗುವಿಗೆ ತಿಳಿಸುವಂತಿಲ್ಲ. ಮುಗ್ಧ ಬಾಲಕನ ಕೊರಳಿಗೆ ಚೂರಿ ಹಾಕುವುದು! ಮುದಿ ತಂದೆಯಿಂದ ಇಂತಹ ಕಾರ್ಯ ಹೇಗಾಗಬೇಕು? ಆ ಕರ್ಮಯೋಗಿಯ ಮನಸ್ಸು ಹೊಯ್ದಾಡುತ್ತಿದೆ. ಕಟ್ಟಕಡೆಗೆ ಆ ಮಹಾತ್ಯಾಗಿ ಈ ಮಹಾ ಕಾರ್ಯಕ್ಕೆ ಸಿದ್ಧರಾದರು....!

## ಮಗನ ಬಲಿದಾನ

ಮಕ್ಕಾದ ಕಣಿವೆಯಲ್ಲಿ ಸೂರ್ಯೋದಯವಾಗಿದೆ. ಸೂರ್ಯನ ಹೊಂಬೆಳಕು ಕಣಿವೆಯಲ್ಲಿ ಪಸರಿಸಿದೆ. ಜನರು ತಮ್ಮ ತಮ್ಮ ದೈನಂದಿನ ಕಾರ್ಯಗಳಲ್ಲಿ ತೊಡಗಿದ್ದಾರೆ. ತಾಯಿ ಹಾಜರಾರವರೂ ಸಹ ಮನೆಗೆಲಸದಲ್ಲಿ ತಲ್ಲೀನರಾಗಿದ್ದಾರೆ. ಪುಟ್ಟ ಮಗು ಇಸ್ಮಾಈಲ್‌ರವರು ತಮ್ಮ ಸಂಗಡಿಗರೊಡನೆ ಆಟವಾಡುತ್ತಿದ್ದಾರೆ. ಆದರೆ ತಂದೆಯ ಮನಸ್ಸಿನಲ್ಲಿ ನಿಲ್ಲದ ತಳಮಳ. ಒಮ್ಮೆ ಹಾಜರಾರನ್ನು, ಮತ್ತೊಮ್ಮೆ ಇಸ್ಮಾಈಲ್‌ರನ್ನು ನೋಡುತ್ತಾರೆ. ಅವರೀರ್ವರು ಈ ಕಣಿವೆಯಲ್ಲಿ ಪಟ್ಟ ಕಷ್ಟಗಳನ್ನು ಅವಲೋಕಿಸುತ್ತಾರೆ. ಈಗ ಈ ಮಗುವನ್ನು ತಾಯಿಯಿಂದ ಬೇರ್ಪಡಿಸಿ ಅಲ್ಲಾಹನ ಮಾರ್ಗದಲ್ಲಿ ಬಲಿ ಕೊಡಬೇಕು. ಎಂತಹ ವಿಚಿತ್ರ ಕಾರ್ಯ! ಹೃದಯ ತುಂಬಿದೆ. ಆದರೂ ತೋರ್ಪಡಿಸಿದೆ ತಮ್ಮ ಮಡದಿಯನ್ನು ಕರೆದು "ಹಾಜರಾ! ಈ ದಿನ ನಾನು ನನ್ನ ಸ್ನೇಹಿತನ ಮನೆಗೆ ಹೋಗಬೇಕಾಗಿದೆ. ಇಸ್ಮಾಈಲ್‌ರನ್ನೂ ಕರೆದುಕೊಂಡು ಹೋಗುತ್ತೇನೆ. ಅವನಿಗೆ ಸ್ನಾನ ಮಾಡಿಸಿ ಹೊಸ ಬಟ್ಟೆಯನ್ನು ತೊಡಿಸು" ಎಂದಾಗ "ಆಗಲಿ, ನಿಮ್ಮ ಮಗುವನ್ನು ತಯಾರಿಸುತ್ತೇನೆ" ಹೀಗೆಂದು ಹೇಳಿ ಹಾಜರಾ ಇಸ್ಮಾಈಲ್‌ರನ್ನು ತಯಾರಿಸಿ ಪತಿಯ ಬಳಿ ಒಪ್ಪಿಸುತ್ತಾಳೆ. ತಾಯಿ ಮಗುವನ್ನು ದಿಟ್ಟಿಸಿ ನೋಡುತ್ತಾರೆ. ಮಗನು ಶಾಶ್ವತವಾಗಿ ಅಗಲುತ್ತಾನೆಂಬ ವಿಷಯ ಆ ಮುಗ್ಧೆಗೆ ತಿಳಿದಿಲ್ಲ. ಹಾಗಾಗಿದ್ದಲ್ಲಿ ಕಣ್ತುಂಬ ನೋಡುತ್ತಿದ್ದರೇನೋ! ತಂದೆ-ಮಗ ಇಬ್ಬರೂ ಮಕ್ಕಾದಿಂದ ಮಿನಾದ ಕಡೆ ಪ್ರಯಾಣಿಸುತ್ತಾರೆ. ತಂದೆ ಇಬ್ರಾಹೀಮ್‌ರವರು ಮಗನಿಗೆ ತಿಳಿಯದ ರೀತಿ ಒಂದು ಚೀಲದಲ್ಲಿ ಹಗ್ಗ ಮತ್ತು ಹರಿತವಾದ ಚೂರಿಯನ್ನು ಇಟ್ಟಿರುತ್ತಾರೆ. ಮಗನು ತಂದೆಯ ಕೈ ಹಿಡಿದು ಹಿಂದೆ ಹಿಂದೆ ಬರುತ್ತಿದ್ದಾನೆ....! ಮತ್ತೊಮ್ಮೆ ಇತಿಹಾಸ ಎಚ್ಚೆತ್ತು ಪರಿಸ್ಥಿತಿ ವಿಚಾರಿಸುತ್ತದೆ!

"ಏನಾಗುತ್ತಿದೆ ತಂದೆ ಮಗ ಎಲ್ಲಿಗೆ ಹೋಗುತ್ತಿದ್ದಾರೆ?"

"ನಿನಗೆ ಗೊತ್ತಿಲ್ಲವೆ"

"ಇಲ್ಲ, ನನಗಾವುದೂ ಗೊತ್ತಿಲ್ಲ"

"ಅಲ್ಲಾಹನ ಆಜ್ಞೆಯನ್ನು ನೆರವೇರಿಸಲು ಮಗನ ಕೊರಳಿಗೆ ತಂದೆ ಚೂರಿ ಹಾಕಬೇಕಾಗಿದೆ...!"

"ಇದು ಇಬ್ರಾಹೀಮರ ಕೊನೆಯ ಪರೀಕ್ಷೆ"

"ಇಂತಹ ಪರಿಸ್ಥಿತಿ ನನ್ನ ಇತಿಹಾಸದಲ್ಲಿ ಇದೇ ಮೊದಲು" ಇತಿಹಾಸ ಸುಮ್ಮನಾಗುತ್ತದೆ.

ಮಿನಾದ ಬಂಡೆಗಳು ಈ ದೃಶ್ಯವನ್ನು ನೋಡುತ್ತಿವೆ. ಅವುಗಳಿಗೆ ಮಾತನಾಡಲು ಬರುತ್ತಿದ್ದರೆ ತಂದೆ-ಮಗನ ತ್ಯಾಗದ ಪ್ರತೀಕವನ್ನು ಕೊಂಡಾಡುತ್ತಿದ್ದುವೋ ಏನೋ! ತಂದೆಗೆ ದುಃಖ ಉಮ್ಮಳಿಸುತ್ತದೆ. ಮಗನಿಗೆ ಇದಾವುದರ ಅರಿವಿಲ್ಲ...! ತಂದೆ ಮಗನಿಗೆ

"ಇಸ್ಮಾಈಲ್...."!

"ಅಪ್ಪಾ! ಹೇಳಿರಿ ಏನಾಗಬೇಕು....!

ಮೌನ ಆವರಿಸಿದೆ. ಪುನಃ ತಂದೆ....

'ಇಸ್ಮಾಈಲ್'

"ತಂದೆಯವರೇ ಅಪ್ಪಣೆ ಕೊಡಿರಿ ಏನಾಗಬೇಕು" ಇಬ್ರಾಹೀಮ್‌ರಿಗೆ ಮಾತು ಹೊರಡುತ್ತಿಲ್ಲ ಗಂಟಲು ಬಿಗಿದಿದೆ.

"ಮಗನೇ!....... ನಾನು ಕನಸಿನಲ್ಲಿ ನಿನ್ನನ್ನು ಬಲಿ ಕೊಡುವ ದೃಶ್ಯ ನೋಡಿರುವೆನು...! ಇದಕ್ಕೆ ನಿನ್ನ ಅಭಿಪ್ರಾಯವೇನು?" ಎಂದಾಗ ಆ ಮಹಾತ್ಯಾಗಿಯ ಮಗ ಇಸ್ಮಾಈಲ್ ತಡಮಾಡದೆ,

"ಅಪ್ಪಾ! ನೀವೆಂತಹ ಪ್ರಶ್ನೆ ಕೇಳುತ್ತಿರುವಿರಿ. ಅಲ್ಲಾಹನ ಆಜ್ಞೆಯನ್ನು ನೆರವೇರಿಸಿರಿ. ಖಂಡಿತ ನಾನು ಸಹನೆಯಿಂದಿರುವುದನ್ನು ಕಾಣುವಿರಿ" ಎಂದು ಅಳುಕದೆ ಉತ್ತರಿಸುತ್ತಾರೆ. ಈಗ ತಂದೆಯ ಮನಸ್ಸು ಗಟ್ಟಿಯಾಗುತ್ತದೆ. ಮೊದಲೇ ತಂದಿದ್ದ ಹಗ್ಗದಿಂದ ತನ್ನ ಮಗನ ಕೈಕಾಲುಗಳನ್ನು ಬಿಗಿಯಾಗಿ ಕಟ್ಟಿ ತಮ್ಮ ಕಣ್ಣುಗಳಿಗೆ ಬಟ್ಟೆ ಕಟ್ಟಿಕೊಂಡು ಈ ಏಕದೇವತ್ವದ ಹರಿಕಾರ ತನ್ನ ಮಮತೆಯ ಮಗನ ಕೊರಳಿಗೆ ಚೂರಿ ಇಡಲು ತಯಾರಾಗುತ್ತಾರೆ. ಇದೆಂತಹ ಅದ್ಭುತ ಕಾರ್ಯ! ಜಗತ್ತು ಅದುವರೆಗೆ ಕಂಡರಿಯದ ಮಹಾ ಸಾಧನೆ! ಗಾಳಿಯ ಚಲನೆ ನಿಂತಿದೆ! ಚರಾಚರ ವಸ್ತುಗಳು ಸ್ತಬ್ಧವಾಗಿ ವೀಕ್ಷಿಸುತ್ತಿದೆ. ಆಕಾಶದಲ್ಲಿ ದೇವಚರರ ದಂಡು ತಂದೆ-ಮಗನ ಅಸಾಧಾರಣ ತ್ಯಾಗ ಬಲಿದಾನದ ಪ್ರತೀಕವನ್ನು ಎವೆಯಿಕ್ಕದೆ ನೋಡುತ್ತಿದ್ದಾರೆ. ಅದೊಂದು ಅದ್ಭುತ ನೋಟ...!

ಇತಿಹಾಸ ಪುನಃ ಎಚ್ಚೆತ್ತು ತನ್ನ ಬಹುದಿನಗಳ ನೆನಪಿನತ್ತ ದೃಷ್ಟಿ ಹಾಯಿಸುತ್ತದೆ. ಅಲ್ಲಾಹನು ಮಾನವನನ್ನು ಭೂಮಿಯ ಮೇಲೆ ಸೃಷ್ಟಿಸುವ ತೀರ್ಮಾನ ಕೈಗೊಂಡಿರುತ್ತಾನೆ. ಆಗ ನೆರೆದಿದ್ದ ದೇವಚರರು "ಪ್ರಭೂ! ಭೂಮಿಯಲ್ಲಿ ಮಾನವನನ್ನು ಏಕೆ ಸೃಷ್ಟಿಸುವೆ

ಅವನಾದರೋ ಜಗಳಗಂಟಿ, ಕೃತಘ್ನ. ಜಗತ್ತಿನಲ್ಲಿ ಕ್ಷೋಭೆ ಉಂಟು ಮಾಡುವವನಾಗಿದ್ದಾನೆ. ನಿನ್ನ ಸ್ತುತಿ ಮಾಡಲು ನಾವಿದ್ದೇವೆ" ಎಂದು ಹೇಳಿದ ಸಂದರ್ಭ ನೆನಪಿಗೆ ಬರುತ್ತದೆ. ಆದರೆ ಈಗ ಈ ಮಿನಾದ ಕಲ್ಲುಬಂಡೆಗಳ ಮಧ್ಯೆ ನಡೆಯುತ್ತಿರುವುದೇನು? ಅಲ್ಲಾಹನು ದೇವಚರರಿಗೆ ಹಿಂದೆ ಹೇಳಿದ ಮಾತು. "ನನಗೆ ತಿಳಿದಿರುವುದು ನಿಮಗೆ ತಿಳಿದಿಲ್ಲ. ಮಾನವನ ಸೃಷ್ಟಿಯ ವೈವಿಧ್ಯತೆಯು ನಿಮಗೆ ತಿಳಿಯಲಾರದು" ಎಂಬುದು ನೆನಪಿಗೆ ಬರುತ್ತದೆ.

ತಂದೆ-ಮಗನ ಅಪ್ರತಿಮ ತ್ಯಾಗದ ಅದ್ಭುತ ದೃಶ್ಯ ದೇವಚರರ ಕಣ್ಮುಂದೆ ಇದೆ. ಅಲ್ಲಾಹನ ನೈಜ ದಾಸರ ಅವನ ದಾಸ್ಯಾರಾಧನೆಯಲ್ಲಿ ತಲ್ಲೀನರಾಗಿರುವವರ ತ್ಯಾಗ ಬಲಿದಾನದ ಪ್ರತೀಕವಾಗಿ ನಡೆದುಕೊಳ್ಳುತ್ತಿರುವ ಅತಿಮಾನವರ ನೈಜ ಚಿತ್ರಣ ಕಂಡು ಬರುತ್ತಿದೆ. ಜಗತ್ತಿನ ಸೃಷ್ಟಿ ಇದಕ್ಕಾಗಿಯೇ ಆಗಿತ್ತು ಎಂಬ ನಿಗೂಢ ಸತ್ಯದ ಅರಿವಾಗುತ್ತದೆ. ಮಾನವನ ಸೃಷ್ಟಿಯ ಕಲ್ಪನೆ, ಆತನ ಚಾರಿತ್ರ್ಯ, ನೈಜ ದಾಸನ ಮನೋಬಲ, ಬೇಷರತ್ತಾಗಿ ತನ್ನ ಸರ್ವಸ್ವವನ್ನೂ ಅಲ್ಲಾಹನಲ್ಲಿ ಅರ್ಪಿಸುವ ಅಗಾಧ ದೃಢವಿಶ್ವಾಸ ನೋಡುವವರನ್ನು ಬೆರಗುಗೊಳಿಸಿತ್ತು....!

ಅಲ್ಲಾಹನು ದಯಾಮಯ, ಕರುಣಾನಿಧಿ ಆತನು ತನ್ನ ನೈಜ ದಾಸರ ರಕ್ಷಕನಾಗಿರುತ್ತಾನೆ. ಅಲ್ಲಾಹನಿಗೆ ಇಸ್ಮಾಈಲ್‌ರವರ ರಕ್ತವಾಗಲಿ, ಮಾಂಸವಾಗಲಿ ಬೇಕಿರಲಿಲ್ಲ. ಇಬ್ರಾಹೀಮ್‌ರವರ ದೃಢಚಿತ್ತತೆ, ಧರ್ಮನಿಷ್ಠೆ ಹಾಗೂ ಅಲ್ಲಾಹನಲ್ಲಿ ಬಲವಾದ ನಂಬಿಕೆಯ ಅಂಶ ಬೇಕಿತ್ತು. ಈ ಅಂತಿಮ ಪರೀಕ್ಷೆಯಲ್ಲಿ ಇಬ್ಬರೂ ತೇರ್ಗಡೆಯಾಗುತ್ತಾರೆ. ಇಬ್ರಾಹೀಮ್‌ರವರು ತಮ್ಮ ಮಗನ ಎಳೆಯ ಕೊರಳಿನ ಮೇಲೆ ಹರಿತವಾದ ಚೂರಿಯನ್ನು ಚಲಾಯಿಸುತ್ತಾರೆ. ಅಲ್ಲಿ ಯಾವ ವಿಧದ ಮಮತೆ, ವ್ಯಾಮೋಹ, ಕೃತಿಮತೆ ಇಲ್ಲದೆ ಕೇವಲ ಅಲ್ಲಾಹನ ಸಂಪ್ರೀತಿ ಮಾತ್ರ ಎದ್ದು ಕಾಣುತ್ತಿತ್ತು. ಇದು ಅವರ ದೃಢವಿಶ್ವಾಸ, ಧರ್ಮನಿಷ್ಠೆ ಹಾಗೂ ಅಲ್ಲಾಹನನ್ನು ಪ್ರೀತಿಸುವ ಉಜ್ವಲ ನಮೂನೆಯಾಗಿತ್ತು. ಅವರ ಈ ಶ್ರೇಷ್ಠತೆಯನ್ನು ಕುರ್‌ಆನ್ ಈ ರೀತಿ ವ್ಯಕ್ತಪಡಿಸುತ್ತದೆ" ಕೊನೆಗೆ ಇಬ್ಬರೂ ವಿಧೇಯತೆಯೊಂದಿಗೆ ಶಿರಬಾಗಿದರು ಮತ್ತು ಇಬ್ರಾಹೀಮ್‌ರವರು ಮಗನನ್ನು ಅಧೋಮುಖ ಮಾಡಿ ಮಲಗಿಸಿದರು. ಆಗ ನಾವು ಹೀಗೆ ಹೇಳಿದೆವು. "ಇಬ್ರಾಹೀಮ್" ನೀವು ಸ್ವಪ್ನವನ್ನು ಸತ್ಯ ಗೊಳಿಸಿದಿರಿ. ನಾವು ಪುಣ್ಯ ಕಾರ್ಯವೆಸಗುವವರಿಗೆ ಹೀಗೆಯೇ ಸತ್ಫಲ ನೀಡುತ್ತೇವೆ. ನಿಶ್ಚಯವಾಗಿಯೂ ಇದೊಂದು ಪ್ರತ್ಯಕ್ಷ ಪರೀಕ್ಷೆಯಾಗಿತ್ತು" (ಅಸ್ಸಾಫ್ಫಾತ್, 103-106) ಮಗನ ಕೊರಳನ್ನು ಕತ್ತರಿಸುವಾಗ ಅಲ್ಲಿ ಒಂದು ಆಡು ಪ್ರತ್ಯಕ್ಷವಾಗಿತ್ತು. ಇಬ್ರಾಹೀಮ್‌ರವರ ಚೂರಿಯಿಂದ ಆಡು ದಿಬಹ್ ಆಯಿತು. ಅಲ್ಲಾಹನ ಕರುಣೆಯಿಂದ ಇಸ್ಮಾಈಲ್ ಉಳಿದುಕೊಂಡರು. ಈ ಮಹಾ ಬಲಿದಾನದ ಸಂಕೇತವಾಗಿ ಜಗತ್ತಿನ ಮುಸ್ಲಿಮರು ಈದುಲ್ ಅಝ್‌ಹಾದಂದು ಸಾಮೂಹಿಕವಾಗಿ ಪ್ರಾಣಿಗಳನ್ನು ಬಲಿ ಕೊಡುತ್ತಾರೆ.

ಈ ರೀತಿ ಅಲ್ಲಾಹನು ಇಬ್ರಾಹೀಮ್‌ರನ್ನು(ಅ) ಸಂಪೂರ್ಣ ಪರೀಕ್ಷಿಸಿದ ನಂತರ ಅವರನ್ನು ಜಗತ್ತಿನ ನಾಯಕರನ್ನಾಗಿ ಘೋಷಿಸಿದನು. ಅದನ್ನೇ ಕುರ್‌ಆನ್ ಈ ರೀತಿ ಹೇಳುತ್ತದೆ,

"ಇಬ್ರಾಹೀಮರನ್ನು ಅವರ ಪ್ರಭು ಕೆಲವು ವಿಷಯಗಳಲ್ಲಿ ಪರೀಕ್ಷಿಸಿದ ಸಂದರ್ಭವನ್ನು ಸ್ಮರಿಸಿರಿ. ಅವರು ಅವುಗಳಲ್ಲಿ ಸಫಲರಾದರು." ಆಗ ಅಲ್ಲಾಹನು "ನಾನು ನಿಮ್ಮನ್ನು ಸಕಲ ಜನರ ನಾಯಕರನ್ನಾಗಿ ಮಾಡುವವನಿದ್ದೇನೆ" ಎಂದನು. ಆಗ ಇಬ್ರಾಹೀಮರು "ನನ್ನ ಸಂತಾನಗಳಿಗೂ ಇದೇ ವಾಗ್ದಾನವೇ?" ಎಂದು ಬಿನ್ನವಿಸಿದರು. ಆಗ ಅಲ್ಲಾಹನು "ನನ್ನ ವಾಗ್ದಾನವು ಅಕ್ರಮಿಗಳಿಗೆ ಅನ್ವಯಿಸುವುದಿಲ್ಲ" ಎಂದು ಉತ್ತರಿಸಿದನು. (ಅಲ್‌ಬಕರಃ: 124)

ಹಾಗೂ "ಅಲ್ಲಾಹನಿಗೆ ಶರಣು ಹೋಗಿ ಸುನೀತನಾಗಿ ಏಕನಿಷ್ಠೆಯಿಂದ ಇದ್ದ ಇಬ್ರಾಹೀಮರನ್ನು ಅಲ್ಲಾಹನು ತನ್ನ (ಖಲೀಲ್) ಮಿತ್ರನಾಗಿಸಿಕೊಂಡನು (ಅನ್ನಿಸಾ: 125)

ಈ ರೀತಿ ಇಬ್ರಾಹೀಮರು ಅಲ್ಲಾಹನ ಪ್ರೀತಿಗೆ ಪಾತ್ರರಾಗಿ ಜಗತ್ತಿನಲ್ಲಿ ಅತ್ಯಂತ ಆದರ್ಶಮಯ ಜೀವನ ನಡೆಸಿದರು...!

ಕುರ್‌ಆನಿನಲ್ಲಿ ಇಬ್ರಾಹೀಮರ ಈ ವಿನಮ್ರ ಭಾವನೆಯನ್ನು ಒಂದು ಆದರ್ಶಮಯ ಜೀವನದಂತೆ ನಮ್ಮೆಲ್ಲರಿಗೆ ಪರಿಚಯಿಸುತ್ತ "ನಿಮಗೆ ಇಬ್ರಾಹೀಮ್ ಮತ್ತು ಅವರ ಸಂಗಾತಿಗಳಲ್ಲಿ ಒಂದು ಉತ್ತಮ ಆದರ್ಶವಿದೆ. ಇಬ್ರಾಹೀಮ್ ಮತ್ತು ಅವರ ಸಂಗಾತಿಗಳ ಪ್ರಾರ್ಥನೆ ಇದಾಗಿತ್ತು.

"ನಮ್ಮ ಪ್ರಭೂ! ನಾವು ನಿನ್ನ ಮೇಲೆಯೇ ಭರವಸೆಯನ್ನಿರಿಸಿದೆವು, ನಿನ್ನ ಕಡೆಗೇ ನಾವು ವಾಲಿದೆವು ಮತ್ತು ನಿನ್ನ ಸನ್ನಿಧಿಗೇ ನಮಗೆ ಮರಳಲಿಕ್ಕಿದೆ" (ಅಲ್‌ಮುಮ್ತಹಿನ: 4)

ಈ ರೀತಿ ಇಬ್ರಾಹೀಮ್‌ರವರು(ಅ) ಸಮಸ್ತ ಜಗತ್ತಿಗೆ ಮಾದರಿಯಾದರು.

## ಕಅಬಾ ಭವನ ನಿರ್ಮಾಣ

ಇಬ್ರಾಹೀಮ್‌ರವರು(ಅ) ತಮ್ಮ ಮಡದಿ ಮತ್ತು ಮಗನನ್ನು ಬಿಟ್ಟು ಬಂದಿದ್ದ ಪ್ರದೇಶದಲ್ಲಿ ಒಂದು ಎತ್ತರವಾದ ದಿಣ್ಣೆ ಇತ್ತು. ಅದೇ 'ಕಅಬಾ'ದ ಸ್ಥಾನವಾಗಿತ್ತು. ಬಹಳ ದಿನಗಳಿಂದ ಅದು ಮುಚ್ಚಿ ಹೋಗಿತ್ತು. ಅಲ್ಲಾಹನು ಅದರ ನಿರ್ಮಾಣ ಕಾರ್ಯವನ್ನು ಪ್ರವಾದಿ ಇಬ್ರಾಹೀಮ್ ಹಾಗೂ ಮಗ ಇಸ್ಮಾಈಲ್‌ರವರಿಂದ ಮಾಡಿಸುತ್ತಾನೆ. ತಂದೆ-ಮಗ ಇಬ್ಬರೂ ಸೇರಿ ಆ ಪವಿತ್ರ ಕಾರ್ಯಕ್ಕೆ ಕೈ ಹಾಕುತ್ತಾರೆ. ಏಕದೇವತ್ವ ಸಿದ್ಧಾಂತದ ಬುನಾದಿಯಲ್ಲಿ ಈ ಭವನದ ನಿರ್ಮಾಣವಾಗುತ್ತದೆ. ಅವರ ತ್ಯಾಗ ಬಲಿದಾನದ ದ್ಯೋತಕವಾಗಿ ಈ ಭವನ ನಿಂತಿದೆ. ಜಗತ್ತಿನ ಮುಸ್ಲಿಮರೆಲ್ಲರೂ ಕಅಬಾದಡೆ ಮುಖ ಮಾಡಿ ಆರಾಧನೆ ಮಾಡುತ್ತಾರೆ. ಇದನ್ನು 'ಅಲ್ಲಾಹನ ಭವನ' ಎಂದೂ ಕರೆಯುತ್ತಾರೆ. 'ಬೈತುಲ್ ಹರಮ್' (ಪ್ರತಿಷ್ಠಿತ ಭವನ) 'ಬೈತುಲ್ ಅತೀಕ್' (ಪುರಾತನ ಭವನ) 'ಬೈತುಲ್ ಮಅ್‌ಮೂರ್' (ಜನನಿಬಿಡ ಭವನ) ಎಂದೂ ಕರೆಯುತ್ತಾರೆ. ಇಬ್ರಾಹೀಮ್‌ರವರು ಅಲ್ಲಾಹನೊಂದಿಗೆ ನಿವೇದಿಸಿದ್ದು, "ಈ ಪ್ರತಿಷ್ಠಿತ ಭವನದ ಬಳಿ ತನ್ನ ಸಂತಾನವನ್ನು ನೆಲೆಗೊಳಿಸುವುದರ ಉದ್ದೇಶ ಕೇವಲ ಅಲ್ಲಾಹನ ಆರಾಧನೆ ನಡೆಯಬೇಕು" ಎಂದಾಗಿತ್ತು. ಇವರಿಬ್ಬರೂ ಕಅಬಾ ಭವನದ ಗೋಡೆಗಳನ್ನು ಕಟ್ಟುತ್ತಿದ್ದಾಗ ಹೀಗೆ ಪ್ರಾರ್ಥಿಸುತ್ತಿದ್ದರು.

"ಓ ಪ್ರಭೂ! ನಮ್ಮಿಂದ ಈ ಸೇವೆಯನ್ನು ಸ್ವೀಕರಿಸು, ನಿಶ್ಚಯವಾಗಿಯೂ ನೀನು ಎಲ್ಲವನ್ನೂ ಆಲಿಸುವವನೂ ಎಲ್ಲವನ್ನೂ ತಿಳಿದವನೂ ಆಗಿರುತ್ತೀಯ."

(ಕುರ್‌ಆನ್, 2:127)

ಹಾಗೂ "ಓ ಪ್ರಭು! ನಮ್ಮಿರ್ವರನ್ನೂ ನಿನ್ನ ಆಜ್ಞಾನುಸಾರಿಯಾಗಿ ಮಾಡು. ನಮ್ಮ ಸಂತತಿಯಲ್ಲಿ ನಿನ್ನ ಆಜ್ಞಾನುಸಾರಿಯಾದ ಒಂದು ಸಮುದಾಯವನ್ನು ಎಬ್ಬಿಸು. ನಮಗೆ ನಿನ್ನ ದಾಸ್ಯ ಆರಾಧನೆಯ ಕ್ರಮಗಳನ್ನು ತೋರಿಸಿಕೊಡು ಹಾಗೂ ನಮ್ಮ ಅಪರಾಧಗಳನ್ನು ಕ್ಷಮಿಸು. ನೀನು ಮಹಾ ಕ್ಷಮಾದಾನಿಯೂ ಕರುಣಾನಿಧಿಯೂ ಆಗಿರುತ್ತೀಯೆ." (ಕುರ್‌ಆನ್, 2:128)

ಹೀಗೆಂದು ಪ್ರಾರ್ಥಿಸುತ್ತಾ ಇಬ್ಬರೂ ಆ ಪವಿತ್ರ ಭವನವನ್ನು ನಿರ್ಮಿಸುತ್ತಿದ್ದರು. ಈ ಕರ್ಮ ಯೋಗಿಯು ತನ್ನ ಜೀವನದುದ್ದಕ್ಕೂ ತನ್ನ ಸಮುದಾಯದ ಜನರ ಶ್ರೇಯಸ್ಸಿಗಾಗಿ, ಅವರ ಇಹಪರಗಳ ಅಭಿವೃದ್ಧಿಗಾಗಿ ಪ್ರಾರ್ಥಿಸುತ್ತಿದ್ದರೇ ವಿನಹ ಪ್ರಾಪಂಚಿಕ ಸುಖ ಭೋಗಗಳಿಗಾಗಿ ಕಿಂಚಿತ್ತೂ ಯೋಚಿಸುತ್ತಿರಲಿಲ್ಲ. ಅವರು ಆ ಭವನದ ನಿರ್ಮಾಣ ಮಾಡುತ್ತಿದ್ದಾಗ ಗೋಡೆಗಳು ಎತ್ತರಕ್ಕೆ ಹೋಗುತ್ತಿದ್ದಾಗ ಅವರು ಒಂದು ಕಲ್ಲಿನ ಮೇಲೆ ನಿಂತು ಕೆಲಸ ಮಾಡುತ್ತಿದ್ದರು. ಆ ಕಲ್ಲಿನಲ್ಲಿ ಇಬ್ರಾಹೀಮ್‌ರವರ(ಅ) ಪಾದಗಳ ಗುರುತು ಈಗಲೂ ಇದೆ. ಅದನ್ನು ಕಅಬಾ ಭವನದ ಮುಂದೆ ಇಡಲಾಗಿದೆ. ಇದಕ್ಕೆ "ಮಕಾಮೆ ಇಬ್ರಾಹೀಮ್" ಎಂದು ಕರೆಯುತ್ತಾರೆ. ಹಾಜಿಗಳು ಕಅಬಾದ ಪ್ರದಕ್ಷಿಣೆ ಪೂರ್ಣಗೊಂಡಾಗ ಇದರ ಮುಂದೆ ಪ್ರಾರ್ಥನೆ ಮಾಡುವುದು ರೂಢಿಯಲ್ಲಿದೆ.

ಇಬ್ರಾಹೀಮ್‌ರವರು ಒಂದೊಮ್ಮೆ ಅಲ್ಲಾಹನಲ್ಲಿ ಪ್ರಾರ್ಥಿಸುತ್ತಾ "ಓ ನನ್ನ ಪ್ರಭೂ! ಈ ನಗರವನ್ನು ಶಾಂತಿಯ ನಗರವನ್ನಾಗಿ ಮಾಡು ಮತ್ತು ಇಲ್ಲಿಯ ನಿವಾಸಿಗಳ ಪೈಕಿ ಅಲ್ಲಾಹ್ ಮತ್ತು ಅಂತಿಮ ದಿನದಲ್ಲಿ ವಿಶ್ವಾಸವಿಡುವವರಿಗೆ ನಾನಾ ಫಲಗಳ ಆಹಾರವನ್ನು ದಯಪಾಲಿಸು" ಎಂದು ಪ್ರಾರ್ಥಿಸಿದ್ದರು. ಇದರ ಫಲವಾಗಿ ಈಗ ಮಕ್ಕಾ ನಗರದಲ್ಲಿ ಪ್ರಪಂಚದ ನಾನಾ ಭಾಗಗಳಿಂದ ಬರುವ ಹಣ್ಣು ಹಂಪಲುಗಳು ಬೇರೆ ಯಾವ ಪ್ರದೇಶಗಳಲ್ಲಿಯೂ ಗೋಚರಿಸುವುದಿಲ್ಲ. ಆ ಬಂಜರು ಪ್ರದೇಶದಲ್ಲಿ ಏನೂ ಬೆಳೆಯದಿದ್ದರೂ ಸಹ ನೂರಾರು ತರಹದ ತಾಜಾ ಹಣ್ಣುಗಳು ಮಾರುಕಟ್ಟೆಯಲ್ಲಿರುವುದನ್ನು ನೋಡಿದರೆ ಇಬ್ರಾಹೀಮ್‌ರವರ(ಅ) ಪ್ರಾರ್ಥನೆಯನ್ನು ಅಲ್ಲಾಹನು ಸ್ವೀಕರಿಸಿರುವುದು ಗೋಚರಿಸುತ್ತದೆ.

## ಏಕದೇವ ಸಿದ್ಧಾಂತ ಬೇರೆ ಧರ್ಮಗಳಲ್ಲಿ

ಜಗತ್ತಿನಲ್ಲಿ ಒಂದೇ ತೆರನಾದ ಜನರಿಲ್ಲ. ನಾನಾ ಧರ್ಮ, ಅನೇಕ ನಂಬಿಕೆಗಳು, ಆಚಾರ-ವಿಚಾರ, ಸಂಸ್ಕೃತಿಯಲ್ಲಿ ವಿಭಿನ್ನ ನಡತೆಯು ಗೋಚರಿಸುತ್ತವೆ. ಕೆಲವರು ಒಬ್ಬ ದೇವನನ್ನು ಇನ್ನು ಕೆಲವರು ಇಬ್ಬರು, ಮೂವರನ್ನು ಹಾಗೂ ಮತ್ತೆ ಕೆಲವರು ಹಲವಾರು ದೇವರನ್ನು ನಂಬುತ್ತಾರೆ, ಆರಾಧಿಸುತ್ತಾರೆ ಇದನ್ನು ಸಾರಾಸಗಟಾಗಿ

ಅಲ್ಲಗಳೆಯುವಂತಿಲ್ಲ. ಆದರೆ ಪರಸ್ಪರ ಧರ್ಮಗಳನ್ನು ಗೌರವಿಸಬೇಕು, ಮಾನವರೆಲ್ಲಾ ಒಂದೇ ಎಂಬ ನೆಲೆಯಲ್ಲಿ ಪರಸ್ಪರ ಪ್ರೀತಿ ವಿಶ್ವಾಸ ಬೆಳೆಸಿಕೊಳ್ಳಬೇಕು. ಇದು ಇಂದಿನ ಜಗತ್ತಿನಲ್ಲಿ ಕಾಣುತ್ತಿಲ್ಲ. ಪರಸ್ಪರ ದ್ವೇಷ, ಅಸೂಯೆ, ವೈರ ಎದ್ದು ಕಾಣುತ್ತದೆ. ಈ ರೀತಿ ವರ್ತಿಸಲು ಯಾವ ಧರ್ಮದಲ್ಲಿಯೂ ಹೇಳಿಲ್ಲ. ಒಬ್ಬ ನೈಜ ಮುಸ್ಲಿಮನು ತನ್ನ ಧರ್ಮವನ್ನು ಚೆನ್ನಾಗಿ ಅರ್ಥ ಮಾಡಿಕೊಂಡಾಗ ಹಾಗೂ ಒಬ್ಬ ನೈಜ ಹಿಂದೂ ತನ್ನ ಧರ್ಮದ ಸಾರವನ್ನು ಅರಿತಾಗ ಈ ಗೊಂದಲ ಉದ್ಭವಿಸುವುದಿಲ್ಲ. ಇಲ್ಲಿ ಬೇರೆ ಬೇರೆ ಧರ್ಮಗಳಲ್ಲಿ ಏಕದೇವ ಸಿದ್ಧಾಂತದ ಬಗ್ಗೆ ವಿವರಿಸಲಾಗಿದೆ. ಇದನ್ನು ಅರ್ಥ ಮಾಡಿಕೊಂಡಲ್ಲಿ ಈ ಗೊಂದಲ ನಿವಾರಣೆಯಾಗುತ್ತದೆ.

ಸಾಮಾನ್ಯವಾಗಿ ಹಿಂದೂಗಳು ವೇದಗಳನ್ನು ಅತ್ಯಂತ ಶ್ರೇಷ್ಠ ಗ್ರಂಥಗಳು ಹಾಗೂ ಅತ್ಯಂತ ಪ್ರಾಚೀನ ಗ್ರಂಥಗಳೆಂದು ನಂಬುತ್ತಾರೆ. ಅವುಗಳಲ್ಲೇ ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ ಅಥರ್ವವೇದ ಎಂದು ನಾಲ್ಕು ಭಾಗಗಳಾಗಿದೆ. ಇದರ ಜೊತೆಗೆ ನಾನಾ ಉಪನಿಷತ್ತುಗಳು, ಪುರಾಣಗಳು, ರಾಮಾಯಣ, ಮಹಾಭಾರತ ಕಾವ್ಯಗಳು ಹಾಗೂ ಭಗವದ್ಗೀತೆ ಮೊದಲಾದ ಗ್ರಂಥಗಳನ್ನು ನಂಬುತ್ತಾರೆ. ಇವೆಲ್ಲವುಗಳನ್ನು ಅಧ್ಯಯನ ಮಾಡಿದಾಗ "ಏಕದೇವ ಸಿದ್ಧಾಂತ" ಗೋಚರಿಸುತ್ತದೆ. "ಏಕಮೇವಾದ್ವಿತೀಯಂ" ಪ್ರಭುವು ಕೇವಲ ಒಬ್ಬನೇ ಆತನ ಹೊರತು ಅನ್ಯರಿಲ್ಲ. **(ಚಂದೋಗ್ಯೋಪನಿಷತ್, 6-21)**

"ಎಲ್ಲರಲ್ಲಿರುವವನು, ಜಗತ್ತನ್ನು ಸೃಷ್ಟಿಸುವವನು, ಹಾಗೂ ಲಯ ಮಾಡುವವನಾದ ಪರಮೇಶ್ವರನೇ! ನೀನೇ ನಮ್ಮೆಲ್ಲರ ತಂದೆ-ತಾಯಿಯಾಗಿರುವೆ. ಆದುದರಿಂದ ನಿನ್ನನ್ನೇ ಸ್ತುತಿಸುತ್ತೇವೆ." **(ಸಾಮವೇದ 304- 2-13)**

ವೀರಶೈವ ಧರ್ಮದಲ್ಲಿ, "ಇಬ್ಬರು ಮೂವರು ದೇವರು ಎಂದು ಉಬ್ಬುಬ್ಬಿ ಮಾತನಾಡಬೇಡ ದೇವನೊಬ್ಬ" ಎಂದು ವಚನ ಸಾಹಿತ್ಯದಲ್ಲಿ ಏಕದೇವತ್ವದ ಸ್ಪಷ್ಟ ನಿಲುವಿದೆ. "ಆ ಪರಮಾತ್ಮನು ಎಲ್ಲ(ದ)ರಲ್ಲಿಯೂ ವ್ಯಾಪಕನು, ಶೀಘ್ರಕಾರಿಯು ಮತ್ತು ಅನಂತ ಬಲಶಾಲಿಯೂ, ಶುದ್ಧನೂ, ಸರ್ವಜ್ಞನೂ, ಸರ್ವಾಂತರ್ಯಾಮಿಯೂ ಆಗಿದ್ದಾನೆ." **(ಯಜುರ್ವೇದ, 40-8)**

"ಯಾವನು ಸಮಸ್ತ ಜಗತ್ತಿನಲ್ಲಿ ವ್ಯಾಪಕನಾಗಿದ್ದಾನೋ ಆ ನಿರಾಕಾರನಾದ ಪರಮಾತ್ಮನ ಪರಿಮಾಣ, ಅವನಂತಹ ವಸ್ತು ಅಥವಾ ಮೂರ್ತಿ ಇಲ್ಲ." **(ಯಜುರ್ವೇದ, 32-3)**

"ಯಾವುದು ಕಣ್ಣಿಗೆ ಕಾಣುವುದಿಲ್ಲವೋ, ಯಾವುದರಿಂದ ಕಣ್ಣುಗಳೆಲ್ಲವೂ ನೋಡುತ್ತಿವೆಯೋ ಅದನ್ನೇ ನೀನು ಬ್ರಹ್ಮನೆಂದು ತಿಳಿದುಕೋ ಮತ್ತು ಅದರ ಉಪಾಸನೆಯನ್ನೇ ಮಾಡು ಹಾಗೂ ಅದರಿಂದ ಬೇರೆಯಾದ ಯಾವ ಸೂರ್ಯ, ವಿದ್ಯುತ್ ಮತ್ತು ಅಗ್ನಿಯೇ ಮೊದಲಾದ ಜಡಪದಾರ್ಥಗಳಿವೆಯೋ ಅವುಗಳ ಉಪಾಸನೆಯನ್ನು ಮಾಡಬೇಡ." **(ಕೇನೋಪನಿಷತ್, 1-5)**

ಈ ರೀತಿ ಹಿಂದೂ ಧರ್ಮದಲ್ಲಿ ಏಕದೇವ ಸಿದ್ಧಾಂತ ಬೇರೂರಿದೆ. ಇದರ ಬಗ್ಗೆ ವಿವೇಚಿಸಬೇಕಾಗಿದೆ.

## ಇಸ್ಲಾಮಿನಲ್ಲಿ ಏಕದೇವ ಸಿದ್ಧಾಂತ

"ಇಸ್ಲಾಮ್" ಏಕದೇವ ಸಿದ್ಧಾಂತವನ್ನು ಬಲವಾಗಿ ಪ್ರತಿಪಾದಿಸುತ್ತದೆ. ಆರಾಧನೆಗೆ ಯೋಗ್ಯನಾಗಿರುವವನು ಕೇವಲ ಅಲ್ಲಾಹನು ಮಾತ್ರ. ಆತನ ಹೊರತು ಅನ್ಯ ಆರಾಧ್ಯರಿಲ್ಲ. ಅಲ್ಲಾಹನು ಏಕೈಕನು, ದಯಾಮಯನು, ಕರುಣಾನಿಧಿಯು, ಅವನಿಗೆ ಸರಿಸಮಾನರಾರೂ ಇಲ್ಲ. ಆತನಿಗೆ ತಂದೆ-ತಾಯಿಗಳಿಲ್ಲ ಹಾಗೂ ಆತನಿಗೆ ಯಾವ ಸಂತಾನವೂ ಇಲ್ಲ. ಆತನು ನಿರಪೇಕ್ಷನು. ಜಗತ್ತು ಆತನನ್ನು ಅವಲಂಬಿಸಿದೆ. ಆತನು ಯಾರನ್ನೂ ಅವಲಂಬಿಸಿಲ್ಲ. ಆತನು ಸರ್ವವನ್ನೂ ವೀಕ್ಷಿಸುವವನೂ, ಆಲಿಸುವವನೂ ಆಗಿರುವನು. ಆತನು ನಿರ್ಣಾಯಕ ದಿನದ ಅಧಿಪತಿ, ಆತನು ಸರ್ವಜ್ಞ. ಆತನು ಅತಿಶ್ರೇಷ್ಠ ತೀರ್ಪುಗಾರ. ಆತನ ಹಿಡಿತದಿಂದ ಯಾರೂ ತಪ್ಪಿಸಿಕೊಳ್ಳಲಾರರು. ಆತನನ್ನು ಮಾತ್ರ ಭಯಪಡಬೇಕು. ಆತನು ಸಕಲ ದೌರ್ಬಲ್ಯ ದೋಷಗಳಿಂದ ವಿಮುಕ್ತನು. ಇಂತಹ ಪ್ರಭುವನ್ನು, ಸೃಷ್ಟಿಕರ್ತನನ್ನು ಆರಾಧಿಸುವ ಭಾವನೆ ಇಸ್ಲಾಮಿನಲ್ಲಿದೆ.

ಈ ಸಿದ್ಧಾಂತದ ರೂವಾರಿ ಇಬ್ರಾಹೀಮ್‌ರವರು(ಅ) ಕಅಬಾ ಭವನವನ್ನು ನಿರ್ಮಿಸುತ್ತಾರೆ. ಕೆಲಸ ಮುಗಿದ ನಂತರ ಅಲ್ಲಾಹನು ಇಬ್ರಾಹೀಮ್‌ರಲ್ಲಿ **"ಜನರನ್ನು ಕೂಗಿ ಕರೆಯಿರಿ, ಹಜ್ಜ್ ಯಾತ್ರೆಗಾಗಿ ಸಾರ್ವತ್ರಿಕ ಕರೆ ನೀಡಿರಿ" (ಅಲ್‌ಹಜ್ಜ್: 27)** ಎಂದು ಆಜ್ಞಾಪಿಸುತ್ತಾನೆ. ಆಗ ಪ್ರವಾದಿಯವರು "ಪ್ರಭೂ! ನನ್ನ ಶಬ್ದ ಅದೆಲ್ಲಿಯ ವರೆಗೆ ಹೋಗಬಹುದು? ಬಹಳ ದೂರ ಇರುವ ಜನರಿಗೆ ನನ್ನ ಕೂಗು ಕೇಳಿಸುವುದಾದರೂ ಹೇಗೆ?" ಎಂದು ಮೊರೆಯಿಡುತ್ತಾರೆ. ಆಗ ಅಲ್ಲಾಹನು "ನೀವು ಕರೆ ನೀಡಿರಿ. ಅದನ್ನು ಜನರಿಗೆ ತಲುಪಿಸುವ ಕಾರ್ಯ ನನ್ನದು" ಎಂದಾಗ ಇಬ್ರಾಹೀಮ್‌ರವರು 'ಅಬೂಕುಬೈಸ್' ಬೆಟ್ಟದ ಮೇಲೇರಿ ಗಟ್ಟಿಯಾಗಿ, "ಓ ಮಾನವ ಸಮುದಾಯವೇ! ಏಕದೇವನಾದ ಅಲ್ಲಾಹನ ಆರಾಧನೆಗಾಗಿ ಈ ಭವನಕ್ಕೆ ಬಂದು ಹಜ್ಜ್ ನಿರ್ವಹಿಸುವಂತೆ ಅಲ್ಲಾಹನು ಆಜ್ಞಾಪಿಸಿದ್ದಾನೆ. ಇಲ್ಲಿಗೆ ಬಂದು ಹಜ್ಜ್ ನಿರ್ವಹಿಸಿರಿ" ಎಂದು ಕೂಗಿ ಕರೆಯುತ್ತಾರೆ. ಇವರ ಕೂಗು ಅದೆಷ್ಟು ದೂರ ಹೋಗಿರಬಹುದು! ಆದರೂ ಅಲ್ಲಾಹನು ಆ ಕರೆಯನ್ನು ಜನರಿಗೆ ತಲುಪಿಸಿದನು. ಇಬ್ನು ಅಬ್ಬಾಸ್‌ರವರ(ರ) ವರದಿಯಂತೆ, ಆ ಕಾಲದ ಜನರು ಕರೆಯನ್ನು ಕೇಳಿರಲಿಲ್ಲ. ಅವರ ಪುರುಷರ ಬೆನ್ನೆಲುಬಿನಿಂದ ಮತ್ತು ಮಹಿಳೆಯರ ಗರ್ಭದಿಂದ ಜನಿಸಿದ ಪೀಳಿಗೆಯು ಈ ಕರೆಯನ್ನು ಕೇಳಿ ಅಲ್ಲಿಗೆ ಬಂದಿತು. 4000 ವರ್ಷಗಳಿಂದಲೂ ಲಕ್ಷೋಪಲಕ್ಷ ಜನಸಾಗರ ವಿವಿಧ ಭಾಗಗಳಿಂದ, ಜಗತ್ತಿನ ಮೂಲೆಮೂಲೆಗಳಿಂದ ಪ್ರತೀವರ್ಷ ಹಜ್ಜ್ ನಿರ್ವಹಿಸಲು ಈ ಪವಿತ್ರ ಭವನಕ್ಕೆ ಬರುತ್ತಿರುತ್ತಾರೆ ಹಾಗೂ ಏಕದೇವ ಸಿದ್ಧಾಂತವನ್ನು ಸಾರುತ್ತಿದ್ದಾರೆ.

ಇಬ್ರಾಹೀಮ್‌ರವರ(ಅ) ಕರೆಯ ತಿರುಳು ಏಕದೇವ ಹಾಗೂ ಏಕ ಮಾನವಕುಲ ಎಂಬುದೇ ಆಗಿದೆ. ಏಕದೇವತ್ವವನ್ನು ಯಥಾವತ್ತಾಗಿ ಅಂಗೀಕರಿಸುವುದರಿಂದ ಎಲ್ಲಾ ಸಮಸ್ಯೆಗಳಿಗೂ ಪರಿಹಾರ ದೊರೆಯುವುದೆಂದೇ ಅಲ್ಲಾಹನ ನಿರ್ಣಯವಾಗಿದೆ...!

## ಕಅಬಾ ಭವನದ ಮಹತ್ವ

ಜಗತ್ತಿನ ಕೇಂದ್ರ ಬಿಂದುವಿನಲ್ಲಿ ಈ ಪವಿತ್ರ ಭವನ ನಿರ್ಮಾಣವಾಗಿದೆ. ಇದರಲ್ಲಿ ಪ್ರವೇಶಿಸಿದವನಿಗೆ ಶಾಂತಿ ದೊರೆಯುತ್ತದೆ. ಈ ದೇವ ಭವನ ಮತ್ತು ಪುಣ್ಯ ಸ್ಥಳಕ್ಕೆ ಬೇರೆ ಯಾವ ಸ್ಥಳವೂ ಸರಿಸಾಟಿಯಾಗಲಾರದು. ಅದು ಮನಸ್ಸಿನ ಕೇಂದ್ರ, ಕಣ್ಣಿಗೆ ತಂಪು. ಇದರಲ್ಲಿ ಆರಾಧನೆ ಮಾಡಿದ್ದಲ್ಲಿ ಬೇರೆ ಕಡೆ ಮಾಡುವುದಕ್ಕಿಂತ ಒಂದು ಲಕ್ಷ ಪಟ್ಟು ಜಾಸ್ತಿ ಪುಣ್ಯ ಲಭಿಸುತ್ತದೆ ಎಂಬ ಹದೀಸ್ ಇದೆ. ಹ. ಅತಾತಾಈಬಿಯವರು(ರ) ಹೇಳಿರುವ ಪ್ರಕಾರ, "ಕಅಬಾ ಭವನದ ಕಡೆಗೆ ಒಂದು ದೃಷ್ಟಿ ಬೀರುವುದೆಂದರೆ ಒಂದು ವರ್ಷವಿಡೀ ನಫಿಲ್ ನಮಾಝ್ ನಿರ್ವಹಿಸುವುದಕ್ಕಿಂತ ಮಿಗಿಲಾಗಿದೆ" ಇದರಿಂದ ಕಅಬಾ ಭವನದ ಅಪಾರ ಮಹತ್ವದ ಅರಿವಾಗುತ್ತದೆ.

ಸಾಮಾನ್ಯವಾಗಿ ಕಅಬಾ ಭವನದ ಪ್ರದಕ್ಷಿಣೆಯನ್ನು ವಿಗ್ರಹಗಳ ಪ್ರದಕ್ಷಿಣೆಗೆ ಹೋಲಿಸುವ ಪರಿಪಾಠವಿದೆ. ಹಿಂದೂಗಳು ವಿಗ್ರಹಗಳಿಗೆ ಪ್ರದಕ್ಷಿಣೆ ಮಾಡುವಂತೆ ಮುಸ್ಲಿಮರೂ ಸಹ ಈ ಭವನದ ಪ್ರದಕ್ಷಿಣೆ ಮಾಡುತ್ತಾರೆ. ಇದು ಸರಿಯಲ್ಲ. ಕಅಬಾ ಎಂಬುದು ಚೌಕಾಕಾರದ ಒಂದು ಕಟ್ಟಡ ಮಾತ್ರ. ನಾಲ್ಕು ಗೋಡೆಗಳು ಮತ್ತು ಅವರ ಮೇಲೆ ಮೇಲ್ಛಾವಣಿಯಿಲ್ಲ. ಇದರಲ್ಲಿ ಯಾವ ವಿಗ್ರಹವೂ ಇಲ್ಲ. ಇದರ ಪ್ರದಕ್ಷಿಣೆಯ ಭಾವನೆಯೇ ಬೇರೆಯಾಗಿದೆ. ಇದರ ಒಂದು ಮೂಲೆಯಲ್ಲಿ ಒಂದು ಕಪ್ಪು ಕಲ್ಲನ್ನು ಇರಿಸಲಾಗಿದೆ. ಇದಕ್ಕೆ "ಹಜರುಲ್ ಅಸ್ವದ್" (ಕಪ್ಪು ಕಲ್ಲು) ಎನ್ನುವರು. ಇದರ ಬಗ್ಗೆಯೂ ಸಹ ತಪ್ಪುಕಲ್ಪನೆಗಳಿವೆ.

ಇಬ್ರಾಹೀಮ್‌ರವರು(ಅ) ಕಅಬಾ ಭವನ ನಿರ್ಮಿಸುತ್ತಿದ್ದಾಗ ಅವರ ಮಗ ಇಸ್ಮಾಈಲ್‌ರವರು ಕಲ್ಲುಗಳನ್ನು ತಂದು ಕೊಡುತ್ತಿದ್ದರು. ತಂದೆಯವರು ಗೋಡೆಗಳಲ್ಲಿ ಕಲ್ಲುಗಳನ್ನು ಜೋಡಿಸುತ್ತಿದ್ದರು. ಆಗ ಇಬ್ರಾಹೀಮ್‌ರವರು ಮಗನಿಗೆ "ಒಂದು ಒಳ್ಳೆಯ ಕಲ್ಲನ್ನು ಆರಿಸಿ ತೆಗೆದುಕೊಂಡು ಬಾ, ಅದನ್ನು ಜನರಿಗೆ ಗುರುತಿಗಾಗಿ ಇಡಬೇಕಾಗಿದೆ" ಎಂದಾಗ ಮಗನು ಒಂದು ಒಳ್ಳೆಯ ಕಲ್ಲನ್ನು ಆರಿಸಿ ತಂದು ತಂದೆಗೆ ಕೊಡುತ್ತಾರೆ. ಆದರೆ ಅದು ಅವರಿಗೆ ಹಿಡಿಸಲಿಲ್ಲ. ಬೇರೊಂದು ಕಲ್ಲನ್ನು ತರಲು ಆಜ್ಞಾಪಿಸುತ್ತಾರೆ. ಆಗ ಇಸ್ಮಾಈಲ್‌ರವರು ಬೇರೆ ಕಲ್ಲು ತರುವುದರೊಳಗೆ ಇಬ್ರಾಹೀಮ್‌ರವರು ಒಂದು ಕಲ್ಲನ್ನು ಗೋಡೆಯಲ್ಲಿ ಜೋಡಿಸಿರುತ್ತಾರೆ. ಆಗ ಇಸ್ಮಾಈಲ್‌ರವರು ತಂದೆಗೆ, "ಅಪ್ಪಾ! ಈ ಕಲ್ಲನ್ನು ಯಾರು ತಂದುಕೊಟ್ಟರು" ಎಂದಾಗ ಅವರು "ನಿನಗಿಂತ ಅಧಿಕ ಚುರುಕಾಗಿರುವವರು" ಎನ್ನುತ್ತಾರೆ. ಇದನ್ನು ದೇವಚರ "ಜಿಬ್‌ರೀಲ್"ರವರು ತಂದು ಇಟ್ಟಿರುವುದಾಗಿ ಪ್ರತೀತಿ ಇದೆ. ಇದು ಒಂದು

ಗುರುತಿನ ಸಂಕೇತ ಮಾತ್ರವಾಗಿದೆ. ಹಾಜಿಗಳು ಈ ಮೂಲೆಯಿಂದ ಪ್ರದಕ್ಷಿಣೆ ಪ್ರಾರಂಭಿಸಿ ಇಲ್ಲಿಗೇ ಮುಗಿಸುತ್ತಾರೆ.

ಒಮ್ಮೆ ಖಲೀಫಾ ಉಮರುಲ್ ಫಾರೂಕ್‌ರವರು(ರ) ಕಅಬಾಕ್ಕೆ ಪ್ರದಕ್ಷಿಣೆ ಮಾಡುವಾಗ ಅವರು ಆ ಕಲ್ಲಿನ ಮುಂದೆ ನಿಂತು, "ನೀನು ಕೇವಲ ಒಂದು ಕಲ್ಲು ಮಾತ್ರ ಎಂದು ನನಗೆ ತಿಳಿದಿದೆ. ನಿನ್ನಿಂದ ಯಾವ ಲಾಭವೂ ಇಲ್ಲ ಹಾಗೂ ಯಾವ ನಷ್ಟವೂ ಇಲ್ಲ. ನಿನ್ನಲ್ಲಿ ಯಾವ ಸಾಮರ್ಥ್ಯವೂ ಇಲ್ಲ....! ಪ್ರವಾದಿಯವರು(ಸ) ನಿನ್ನನ್ನು ಚುಂಬಿಸಿರುವುದರಿಂದ ಮಾತ್ರ ನಾನು ನಿನ್ನನ್ನು ಚುಂಬಿಸುತ್ತೇನೆ. ಅದಿಲ್ಲದಿದ್ದರೆ ನಾನು ನಿನ್ನನ್ನು ಚುಂಬಿಸುತ್ತಿರಲಿಲ್ಲ" ಎಂದು ಹೇಳುತ್ತಾರೆ. ಇದರಿಂದ ಇದರ ನೈಜ ವಾಸ್ತವಿಕತೆಯ ಅರಿವಾಗುತ್ತದೆ. ಹಜ್ಜ್ ವೇಳೆ ಈ ಕಲ್ಲನ್ನು ಚುಂಬಿಸಲೇಬೇಕೆಂಬ ಕಡ್ಡಾಯ ವಿಧಿಯಿಲ್ಲ ಹಾಗೂ ಅದರ ಆರಾಧನೆ ಮಾಡುತ್ತಿಲ್ಲ. ಯಾವ ಮುಸ್ಲಿಮನೂ ತನ್ನ ಮನೆಯಲ್ಲಿ ಈ ಕಲ್ಲಿನಂತಹ ಯಾವ ವಸ್ತುವನ್ನೂ ಇಟ್ಟುಕೊಂಡಿಲ್ಲ...! ಅದಕ್ಕೆ ಅಷ್ಟು ಮಹತ್ವವಿದ್ದಿದ್ದರೆ ಮುಸ್ಲಿಮರೂ ತಮ್ಮ ಮನೆಗಳಲ್ಲಿ ಅಂತಹ ಕಲ್ಲಿನ ಚಿತ್ರವನ್ನಾದರೂ ಇಡುತ್ತಿದ್ದರು. ಆದರೆ ಯಾವ ಮನೆಯಲ್ಲೂ ಅದು ಗೋಚರಿಸುವುದಿಲ್ಲ. ಮುಸ್ಲಿಮರು ಹಜರುಲ್ ಅಸ್ವದನ್ನು ಆರಾಧಿಸುತ್ತಾರೆಂಬ ವಾದ ನಿರಾಧಾರವಾದುದು.

## ಹಜ್ಜ್‌ನ ವಾಸ್ತವಿಕತೆ

ಕಅಬಾ ಭವನದ ನಿರ್ಮಾಣ ಯಾವುದರ ಸಲುವಾಗಿ ಆಗಿತ್ತೆಂಬುದು ಈ ಹಿಂದೆಯೇ ವಿವರಿಸಲಾಗಿದೆ. ಹಜ್ಜ್ ಕರ್ಮ ಇಸ್ಲಾಮಿನ ಮುಖ್ಯ ವಿಧಿಗಳಲ್ಲಿ ಒಂದಾಗಿದೆ. ಪ್ರವಾದಿಯವರು(ಸ) ತಮ್ಮ ಒಂದು ವಚನದಲ್ಲಿ ಈ ರೀತಿ ಹೇಳಿರುವರು, "ಇಸ್ಲಾಮಿನ ತಳಹದಿಯು 5 ವಸ್ತುಗಳಲ್ಲಿದೆ. 1) ಅಲ್ಲಾಹನ ಹೊರತು ಅನ್ಯ ಆರಾಧ್ಯರಿಲ್ಲ ಹಾಗೂ ಮುಹಮ್ಮದ್‌ರವರು(ಸ) ಅಲ್ಲಾಹನ ಸಂದೇಶವಾಹಕರು ಹಾಗೂ ದಾಸರು ಆಗಿರುವರೆಂದು ಸಾಕ್ಷ್ಯ ನುಡಿಯುವುದು. 2) ನಮಾಝ್ ಸಂಸ್ಥಾಪಿಸುವುದು. 3) ಝಕಾತ್ (ಕಡ್ಡಾಯದಾನ) ನೀಡುವುದು. 4) ರಮಝಾನ್ ತಿಂಗಳಲ್ಲಿ ಹಗಲು ಉಪವಾಸ ವ್ರತ ಆಚರಿಸುವುದು ಹಾಗೂ 5) ಜೀವನದಲ್ಲಿ ಒಂದು ಬಾರಿ ಹಜ್ಜ್ ನಿರ್ವಹಿಸುವುದು.

ಆರಾಧನೆಗಳಲ್ಲಿ ಎರಡು ವಿಧ. ಹಜ್ಜ್ ಈ ಎರಡೂ ಬಗೆಯ ಆರಾಧನೆಗಳ ನ್ನೊಳಗೊಂಡಿದೆ. ಇದರಲ್ಲಿ ಸ್ವತಃ ಮನುಷ್ಯನು ತನ್ನನ್ನು ತೊಡಗಿಸಬೇಕು. ದೂರದೂರದಿಂದ ಪ್ರಯಾಣ ಬೆಳೆಸಿ ಮನೆ ಮಠ, ನೆಂಟರಿಷ್ಟರು, ಹೆಂಡತಿ ಮಕ್ಕಳನ್ನು ತೊರೆದು ಅಲ್ಲಾಹನ ಹೆಸರಿನಲ್ಲಿ ಹೊರಡಬೇಕು ಹಾಗೂ ಅದಕ್ಕಾಗಿ ತಾನು ಗಳಿಸಿದ ಹಣವನ್ನೂ ವೆಚ್ಚ ಮಾಡಬೇಕು. ಇದು ಅತ್ಯಂತ ಮಹತ್ವವಾದ ಆರಾಧನೆಯಾಗಿದೆ. ಅಲ್ಲಾಹನ ಮಾರ್ಗದಲ್ಲಿ ಆತನ ಅತಿಥಿಯಾಗಿ ಹೋಗುವ ರೀತಿ, ಆತನನ್ನು ಹಗಲಿರುಳೂ ಆರಾಧಿಸುವ ರೀತಿ ಅತ್ಯಂತ ಭಾವುಕವಾಗಿರುತ್ತದೆ.

ಹಜ್ಜ್ ಮಾಡುವವರು ಹೇಳುವ ತಲ್ಬಿಯಾ (ಅಲ್ಲಾಹನನ್ನು ಸ್ಮರಿಸುವುದು) ಅದೆಷ್ಟು ಭಾವಪೂರ್ಣವಾಗಿದೆ.

"ಲಬ್ಬೈಕಲ್ಲಾಹುಮ್ಮ ಲಬ್ಬೈಕ್. ಲಬ್ಬೈಕ ಲಾ ಶರೀಕಲಕ ಲಬ್ಬೈಕ್ ಇನ್ನಲ್ ಹಮ್ದ ವನ್ನಿಅ್‌ಮತ ಲಕ ವಲ್ ಮುಲ್ಕ್ ಲಾ ಶರೀಕಲಕ್."

(ನಾನು ಹಾಜರಿದ್ದೇನೆ. ಓ ಅಲ್ಲಾಹ್! ನಾನು ಹಾಜರಿದ್ದೇನೆ. ನಿನಗಾರೂ ಸಹಭಾಗಿಗಳಿಲ್ಲ. ನಾನು ಹಾಜರಿದ್ದೇನೆ. ಸ್ತುತಿ ಸ್ತೋತ್ರವೂ ನಿಸ್ಸಂದೇಹವಾಗಿಯೂ ನಿನಗೇ ಆಗಿವೆ. ಅನುಗ್ರಹವೆಲ್ಲವೂ ನಿನ್ನದೇ ಆಗಿದೆ. ಆಧಿಪತ್ಯವು ಸರ್ವ ಸಂಪೂರ್ಣವಾಗಿ ನಿನ್ನದೇ ಆಗಿದೆ. ನಿನಗಾರೂ ಸಹಭಾಗಿಗಳಿಲ್ಲ.)

ಎಂದು ಏಕಕಂಠದಿಂದ ಏಕದೇವತ್ವದ ಪರಾಕಾಷ್ಠೆಯನ್ನು ಪ್ರತಿಬಿಂಬಿಸುತ್ತ ಸುತ್ತುವ ದೃಶ್ಯ...! ಅದೆಷ್ಟು ಮಹತ್ವದ್ದಾಗಿದೆ...! ಒಂದು ಬಿಳಿಯ ಬಟ್ಟೆಯನ್ನು ಸುತ್ತಿಕೊಂಡು ಒಂದು ಬಟ್ಟೆಯನ್ನು ಹೆಗಲ ಮೇಲೆ ಹಾಕಿಕೊಂಡು ತಲೆಯ ಮೇಲೆ ಏನೂ ಹಾಕದೆ ತನ್ನ ಸರ್ವಸ್ವವನ್ನೂ ಅಲ್ಲಾಹನಿಗೆ ಅರ್ಪಿಸುತ್ತ "ನನ್ನ ನಮಾಝ್, ನನ್ನ ಸಕಲ ಆರಾಧನೆಗಳು, ನನ್ನ ಜೀವನ, ನನ್ನ ಮರಣ ಎಲ್ಲವೂ ಏಕೈಕನಾದ ಅಲ್ಲಾಹನಿಗಾಗಿ" ಎಂದು ಅಲ್ಲಾಹನ ಹಿರಿಮೆಯನ್ನು ಕೊಂಡಾಡುತ್ತಾ, ಅಲ್ಲಾಹನ ಅನನ್ಯ ದಾಸನಂತೆ ತಿರುಗಾಡುವ ಹಾಜಿಯ ನೈಜತೆಯನ್ನು ನೋಡಬೇಕಾದಲ್ಲಿ ದುಲ್‌ಹಜ್ಜ್ ತಿಂಗಳಲ್ಲಿ ಹಾಜಿಗಳು ದೀಪದ ಸುತ್ತಲೂ ಪತಂಗಗಳು ಸುತ್ತುವಂತೆ ಕಅಬಾದ ಸುತ್ತಲೂ" ತಿರುಗಾಡುವುದನ್ನು ನೋಡಬೇಕು!

ಅದೊಂದು ಜಾಗತಿಕ ಸಮ್ಮೇಳನ. ಜಗತ್ತಿನ ನಾನಾ ಮೂಲೆಗಳಿಂದ ನಾನಾ ಭಾಷೆಗಳನ್ನಾಡುವ, ವಿವಿಧ ನಾಗರಿಕತೆಯನ್ನು ಹೊಂದಿರುವ ಕರಿಯ-ಬಿಳಿಯ, ಬಡವ-ಶ್ರೀಮಂತರೆಂಬ ವ್ಯತ್ಯಾಸವಿಲ್ಲದೆ ಒಂದೇ ತೆರನಾದ ವಸ್ತ್ರ ಧರಿಸಿ ಅಲ್ಲಾಹನ ಸಮ್ಮುಖದಲ್ಲಿ ಎಲ್ಲರೂ ಸಮಾನರು...! ಇಲ್ಲಿ ಅಂತಸ್ತಿಗೆ ಬೆಲೆಯಿಲ್ಲ. ಕೇವಲ ಧರ್ಮನಿಷ್ಠೆಯನ್ನು ಮಾತ್ರ ನೋಡಲಾಗುತ್ತದೆ ಎಂಬ ಕಟು ಸತ್ಯವನ್ನು ತೋರ್ಪಡಿಸುವ ಈ ಸಮ್ಮೇಳನ ನಿಜಕ್ಕೂ ಅತ್ಯದ್ಭುತವಾದುದು. ಒಬ್ಬರಿಗೊಬ್ಬರು ಪರಿಚಯವಿಲ್ಲದ, ಭಾಷೆ ತಿಳಿಯದ ಜನರ ಮಧ್ಯೆ ಅದಾವುದೋ ಭಾವುಕತೆ, ಭ್ರಾತೃಪ್ರೇಮ, ನೈಜ ವಾತ್ಸಲ್ಯ ಮನೆಮಾಡಿರುತ್ತದೆ. ನಗು ನಗುತ್ತಾ ಸಲಾಮ್ ಹೇಳುವುದು, ಕೈ ಕುಲುಕಿಸುವುದು, ಪರಸ್ಪರ ಅಪ್ಪಿಕೊಳ್ಳುವುದು, ಭುಜಕ್ಕೆಭುಜ ತಾಗಿಸಿಕೊಂಡು ನಿಂತು ಸಾಮೂಹಿಕ ನಮಾಝ್ ಮಾಡುವುದು ಇದನ್ನು ನೋಡಿದರೆ ನೈಜ ಪ್ರಜಾಸತ್ತೆಯ ಅರಿವಾಗುತ್ತದೆ. ಒಂದೇ ತಾಯಿಯ ಮಕ್ಕಳಂತೆ, ಒಂದೇ ಕುಟುಂಬದ ಸದಸ್ಯರಂತೆ ನಡೆದುಕೊಳ್ಳುವ ರೀತಿ ಇಸ್ಲಾಮಿನ ಮಹೋನ್ನತೆಯನ್ನು ಪ್ರತಿಬಿಂಬಿಸುತ್ತದೆ! ಇಂತಹ ಪವಿತ್ರ ಭಾವನೆಯನ್ನು ಬಿಂಬಿಸಲೋಸುಗ, ಸೌಹಾರ್ದತೆಯ ಪ್ರತೀಕವನ್ನು ನೆನಪಿಗೆ ತರುವ ಸಲುವಾಗಿ ಪ್ರವಾದಿ ಇಬ್ರಾಹೀಮ್‌ರವರು(ಅ) ಕಅಬಾ ಭವನವನ್ನು ನಿರ್ಮಿಸಿದ್ದರು. ಅವರೇ ಇದರ ರೂವಾರಿ.

ಹಜ್ಜ್‌ನ ಎಲ್ಲಾ ವಿಧಿಗಳಲ್ಲಿ ಇಬ್ರಾಹೀಮ್(ಅ) ಅವರ ಆದರ್ಶ ಪತ್ನಿ ಹಾಜರಾ(ಅ) ಮತ್ತು ಇಸ್ಮಾಈಲ್‌ರವರ ಪೂರ್ಣ ಜೀವನವು ಅನಾವರಣಗೊಂಡು ಅದು ಕಣ್ಣಿಗೆ ಗೋಚರಿಸುತ್ತದೆ. ಕಅಬಾ ಪ್ರದಕ್ಷಿಣೆ, ಝಮ್ ಝಮ್ ನೀರು ಕುಡಿಯುವುದು, ಸಫಾ-

ಮರ್ವಾಗಳ ಮಧ್ಯೆ ಸಈ ಮಾಡುವುದು ಇವುಗಳೆಲ್ಲವೂ ಒಂದು ಉಜ್ವಲ ಸಂದೇಶ ಒಳಗೊಂಡಿದೆ. ಬಾಯಾರಿ ನಿತ್ರಾಣವಾಗಿದ್ದ ಹಸುಳೆ ಇಸ್ಮಾಈಲ್‌ರ ಪ್ರಾಣ ರಕ್ಷಣೆಗಾಗಿ, ಒಂದು ಗುಟುಕು ನೀರಿಗಾಗಿ ಅಬಲೆಯಾದ ಹಾಜರಾ ಓಡಿದ ಹಾಗೂ ಅಲ್ಲಾಹನ ಭರವಸೆಯಲ್ಲಿ ನೀರಿಗಾಗಿ ಪರದಾಡಿದ ದೃಶ್ಯ ಹಾಗೂ ಅವರ ಅನನ್ಯ ತ್ಯಾಗದ ನೆನಪಾಗುತ್ತದೆ. ಅಲ್ಲಾಹನ ನೈಜ ದಾಸನು ತನ್ನ ದಾಸ್ಯತನವನ್ನು ಅಲ್ಲಾಹನೊಬ್ಬನಿಗೇ ಮುಡುಪಾಗಿರಿಸಿ ತಲ್ಲೀನನಾದರೆ ಬಂಡೆಕಲ್ಲುಗಳಲ್ಲಿ ಎಳೆ ಹಸುಳೆಯ ಕಾಲುಗಳ ಬಡಿತದಿಂದ ನೀರಿನ ಬುಗ್ಗೆ ಚಿಮ್ಮುವ ಸೋಜಿಗವು ಸಂಭ್ರಮಿಸುತ್ತದೆ ಎಂಬ ಅಂಶ ಅದೆಷ್ಟು ಶ್ರೇಷ್ಠ! ಮಿನಾದಲ್ಲಿ ಪ್ರಾಣಿಗಳನ್ನು ಬಲಿಕೊಡುವ ದೃಶ್ಯ ತಂದೆ ಮಗನ ಮಹೋನ್ನತ ಪರೀಕ್ಷೆಯ ಅಂಶ ಹಾಗೂ ಅದರಲ್ಲಿ ಅವರಿಬ್ಬರೂ ಉತ್ತೀರ್ಣರಾಗಿ ಅಲ್ಲಾಹನ ಕೃಪೆಗೆ ಪಾತ್ರರಾದ ಚಿತ್ರ ಅನಾವರಣಗೊಳ್ಳುತ್ತದೆ.

ಹಜ್ಜ್ ದಿನವು ಧರ್ಮದ ಸಂಪೂರ್ಣತೆ ಮತ್ತು ಅನುಗ್ರಹಗಳ ಸುವಾರ್ತೆಯ ದಿನವೂ ಆಗಿದೆ. ಹಜ್ಜ್ ಆರಾಧನೆಗಳ ಪೂರ್ಣತೆಯೂ ಆಗಿದೆ. ಇದರಲ್ಲಿ ಆರಾಧನೆಗಳ ಎಲ್ಲಾ ಅಂಶವೂ ಗೋಚರಿಸುತ್ತದೆ. ಇದನ್ನು ಇಸ್ಲಾಮಿನ ಸಾರಾಂಶವೆಂದರೆ ತಪ್ಪಾಗಲಾರದು. ಪ್ರವಾದಿಯವರ(ಸ) ಈ ಮಾತಿನಿಂದ ಹಜ್ಜ್‌ನ ಪಾವಿತ್ರತೆಯನ್ನು ಅರಿಯಬಹುದು" ಯಾರು ಅಲ್ಲಾಹನಿಗಾಗಿ ಹಜ್ಜ್ ನಿರ್ವಹಿಸಿದನೋ ಮತ್ತು ಆ ಸಂದರ್ಭದಲ್ಲಿ ಯಾವುದೇ ಅಪ್ರಿಯ ಕಾರ್ಯಗಳನ್ನು ಮಾಡುವುದಿಲ್ಲವೋ ಅಂತಹ ವ್ಯಕ್ತಿ ಹಜ್ಜ್‌ನಿಂದ ಮರಳುವಾಗ ಆಗ ತಾನೆ ಹುಟ್ಟಿದ ಮಗುವಿನಂತಾಗುತ್ತಾನೆ." ಇದರಿಂದ ಹಜ್ಜ್ ಅದೆಂತಹ ಉಜ್ವಲ ತಪಸ್ಸು ಎಂಬ ಅಂಶ ಗೋಚರಿಸುತ್ತದೆ. ಆತನ ಗತ ಪಾಪಗಳು ಕ್ಷಮಿಸಲ್ಪಟ್ಟು ಅವನ ಬಾಳು ಶುದ್ಧವಾಗುತ್ತದೆ ಎಂದಿರುವರು. ಇನ್ನೊಂದೆಡೆ ಪ್ರವಾದಿಯವರು(ಸ), "ಅರಫಾ ದಿನದಂದು ಅಲ್ಲಾಹನು, ಭೂಮಿ ಆಕಾಶಗಳ ಮಧ್ಯೆ ಬಂದಿಳಿಯುವನು ಮತ್ತು ದೇವಚರರೊಡನೆ ಹೀಗೆನ್ನುವನು, "ನೋಡಿರಿ! ಕೂದಲು ಕೆದರಿರುವ, ಧೂಳು ಮೆತ್ತಿಕೊಂಡಿರುವ ಈ ನನ್ನ ದಾಸರು ದೂರ ದೂರದಿಂದ ಬಂದಿರುವರು. ಇದೋ ನಾನು ನಿಮ್ಮನ್ನೆಲ್ಲಾ ಸಾಕ್ಷಿ ಇರಿಸಿ ಅವರೆಲ್ಲರಿಗೂ ಕ್ಷಮಾದಾನ ನೀಡಿದೆನು. ಅವರ ಸಕಲ ಪಾಪಗಳನ್ನು ಕ್ಷಮಿಸಿದೆನು" ಎಂದು ಹೇಳುವನು. ಇದರಿಂದ ಅಲ್ಲಾಹನ ಮಹಾನತೆಯ ಅರಿವಾಗುತ್ತದೆ.

ಪ್ರವಾದಿಯವರು(ಸ) ಈ ಸುವಾರ್ತೆಯ ಜೊತೆಗೆ ಜನರ ದೌರ್ಭಾಗ್ಯದ ಅಂಶವನ್ನೂ ತಿಳಿಸಿರುವರು, "ದಾರಿವೆಚ್ಚ ಮತ್ತು ಸವಾರಿ ಸೌಕರ್ಯವಿದ್ದೂ ಹಜ್ಜ್‌ಗೆ ಯಾರು ತೆರಳುವುದಿಲ್ಲವೋ ಆತ ಯಹೂದಿಯಾಗಿಯೋ ಕ್ರೈಸ್ತನಾಗಿಯೋ ಮರಣ ಹೊಂದುವುದು ಲೇಸು" ಆದುದರಿಂದ ಹಜ್ಜ್ ಮಾಡುವ ಅನುಕೂಲತೆಗಳಿದ್ದಲ್ಲಿ ತಡಮಾಡದೆ ಹಜ್ಜ್ ನಿರ್ವಹಿಸಬೇಕಾದುದು ನಮ್ಮ ಕರ್ತವ್ಯವಾಗಿದೆ.

ಖ್ಯಾತ ವಿದ್ವಾಂಸ ಖುರ್ರಮ್ ಮುರಾದ್ ಹೇಳುತ್ತಾರೆ, "ಮುಸ್ಲಿಮ್ ಸಮಾಜದ ನೌಕೆಯು ಇಂದು ಆಳ ಸಮುದ್ರದಲ್ಲಿ ಮುಳುಗಿದೆ. ಇಬ್ರಾಹೀಮ್ ಮತ್ತು ಹಾಜರಾರವರು ಸರ್ವಾಧಿಪತಿಯಾದ ಅಲ್ಲಾಹನಲ್ಲಿ ಭರವಸೆ ಇರಿಸಿದಂತೆ ಭರವಸೆ ಇರಿಸದೆ, ಸೊತ್ತು ವಿತ್ತ

ಪ್ರಾಣಗಳ ತ್ಯಾಗವನ್ನು ಸಹಿಸದೆ, ಪರಿಶ್ರಮಗಳನ್ನು ನಡೆಸದೆ, ಅಲ್ಲಾಹನ ಅನುಸರಣೆಯ ಹಾದಿಯಲ್ಲಿ ಸರ್ವಸ್ವವನ್ನೂ ಅರ್ಪಿಸದೆ ಬಿಕ್ಕಟ್ಟಿನಿಂದ ಆ ನೌಕೆಯನ್ನು ಹೊರ ತರಲು ಅವರಿಂದ ಹೇಗೆ ತಾನೆ ಸಾಧ್ಯ? ಪವಿತ್ರ ಭವನದ ಸುಸ್ಪಷ್ಟ ದೃಷ್ಟಾಂತಗಳನ್ನು ದಿನನಿತ್ಯ ಐದು ಬಾರಿ ಸ್ಮರಿಸಬೇಕೆಂದು ಆಜ್ಞಾಪಿಸಲಾಗಿರುವ ಸಮಾಜಕ್ಕೆ ಈ ಕಲುಷಿತ ವಾತಾವರಣ ಹೇಗೆ ತಿಳಿಯಾದೀತು? ಕಲ್ಲು ಹೃದಯದ ಸಮಾಜದಿಂದ ಒಳಿತಿನ ಒರತೆಯು ಹೇಗೆ ಒಸರಬಹುದು. ಈ ಗಂಡಾಂತರದಲ್ಲಿ ಬೆಳಕಿನ ಕಿರಣಗಳು ಹೇಗೆ ಉದಯಿಸಬಹುದೆಂಬ ಪ್ರಶ್ನೆಗಳಿಗೆ ಉತ್ತರ ನೀಡುವ ಹೊಣೆ ಮತ್ತು ಸಾಮರ್ಥ್ಯವೆಲ್ಲಿದೆ? ಕೊಡುವವನು ದುರ್ಬಲ ಅಥವಾ ಅಶಕ್ತನಾಗಿಲ್ಲ. ಆತನಿಗೆ ನಿದ್ರೆಯಾಗಲಿ, ತೂಕಡಿಕೆಯಾಗಲೀ ಬಾಧಿಸುತ್ತಿಲ್ಲ. ಪಡೆಯುವವರ ಅಸಡ್ಡೆ, ನಿರ್ಲಕ್ಷ್ಯವೇ ಸಮಸ್ಯೆಯಾಗಿದೆ. "ದೇವನು ನಮ್ಮನ್ನು ಕೈ ಬಿಡಲಾರನು ಮತ್ತು ನಾನು ಅಲ್ಲಾಹನಿಂದ ಸಂತೃಪ್ತಳಾಗಿದ್ದೇನೆ" ಎಂದು ಓರ್ವ ಅಬಲೆ ಸ್ತ್ರೀಯು ದೃಢ ವಿಶ್ವಾಸದಿಂದ ಸ್ಪಷ್ಟ ಉತ್ತರ ನೀಡಿ ಸಫಾ ಮರ್ವಾಗಳಲ್ಲಿ ಓಡಾಡಿದ್ದರಿಂದ ಕೇವಲ ಕಲ್ಲಿನಿಂದ ನಿರ್ಮಿಸಿದ್ದ ಸಾಮಾನ್ಯ ಭವನಕ್ಕೆ ಉನ್ನತ ಸ್ಥಾನ ದೊರೆತು ಬಂಡೆಯಿಂದ 'ಝುಮ್ ಝುಮ್' ಎಂಬ ಶಾಶ್ವತವಾದ ನೀರಿನ ಝರಿ ಹರಿದಿದ್ದರೆ ಇಂದು ಲೋಕದಲ್ಲಿ ಧರ್ಮಕ್ಕೆ ಆಧಿಪತ್ಯ ಮತ್ತು ವಿಜಯವು ಯಾಕೆ ಸಾಧಿತವಾಗಲಾರದು? ಗಲಭೆ ಗೊಂದಲ ತುಂಬಿದ ಈ ಲೋಕದಲ್ಲಿ ಒಳಿತಿನ ಒರತೆ ಚಿಮ್ಮಿಸಲು ಯಾಕೆ ಸಾಧ್ಯವಿಲ್ಲ? ಮಾನವಕುಲವು ಸನ್ಮಾರ್ಗಕ್ಕಾಗಿ ಹಾತೊರೆಯುತ್ತದೆ. ಗಲಭೆ, ಗೊಂದಲ ಅಕ್ರಮಗಳ ಈ ಬರಡು ಭೂಮಿಯು ಶಾಂತಿಯ ಮೂಲಗಳನ್ನೂ ಹೊಂದಿದೆ. ಆದೇ ವೇಳೆ ಈ ಕಾಲವು ನಮ್ಮ ಇಬ್ರಾಹೀಮರಿಗಾಗಿ ಹುಡುಕಾಡುತ್ತಿದೆ."

ಇದು ಇಂದಿನ ಸಮಾಜದ ನೈಜ ಚಿತ್ರಣ.

## ಇಬ್ರಾಹೀಮ್‌ರವರ(ಅ) ವ್ಯಕ್ತಿತ್ವ

ಈ ವ್ಯಕ್ತಿತ್ವದ ಬಗ್ಗೆ ಬರೆಯುವುದು ಅಷ್ಟು ಸುಲಭವಲ್ಲ. ಅವರು ಜೀವನದ ಎಲ್ಲಾ ರಂಗಗಳಲ್ಲಿ ತಮ್ಮದೇ ಆದ ವೈಯಕ್ತಿಕ ಛಾಯೆಯನ್ನು ಬಿಟ್ಟಿರುವರು. ಬಾಲ್ಯ, ಯೌವನ, ಮುಪ್ಪು ಇವುಗಳಲ್ಲಿ ಅವರು ತೋರಿದ ಸಾಹಸವಾಗಲಿ, ಜೀವನದ ಮೌಲ್ಯಗಳನ್ನು ಎತ್ತಿ ಹಿಡಿದು ಅದರಂತೆ ನಡೆದು ಜಗತ್ತಿಗೆ ಮಾದರಿಯಾಗಿರುವ ಅಂಶವಾಗಲಿ, ತ್ಯಾಗ ಬಲಿದಾನದ ಮಹೋನ್ನತ ರೀತಿಯನ್ನು ತೋರಿಸಿರುವುದಾಗಲಿ ಅವರು ತಮ್ಮದೇ ಆದ ರೀತಿಯನ್ನು ಬಿಟ್ಟು, ಹೊಸ ಇತಿಹಾಸವನ್ನು ಬರೆದಿರುವ ಅಂಶ ಗೋಚರಿಸುತ್ತದೆ. ಅವರು ಯಾವ ತ್ಯಾಗಕ್ಕೂ ಹಿಂಜರಿಯದೆ ನಡೆದ ದಾರಿ, ಅವರ ಹೆಜ್ಜೆಯ ಗುರುತುಗಳು ಮಾನವ ವರ್ಗಕ್ಕೆ ಆದರ್ಶಪ್ರಾಯವಾಗಿವೆ. ಆದರೆ ಅದರಂತೆ ನಡೆಯುವವರು ಕಾಣುತ್ತಿಲ್ಲ. ಅವರ ಜೀವನ ತುಂಬಾ ಸಂಘರ್ಷಮಯ ವಾಗಿತ್ತು. ಪ್ರತಿ ಮಜಲಿನಲ್ಲಿಯೂ ಸಹ ಉತ್ತೀರ್ಣರಾದರು.

ಇಬ್ರಾಹೀಮ್(ಅ) ಕೇವಲ ಒಬ್ಬ ವ್ಯಕ್ತಿಯಲ್ಲ. ಅವರು ಒಂದು ಸಮುದಾಯವಾಗಿದ್ದರು. ಅವರ ಜೀವನ, ರೀತಿನೀತಿಗಳು, ಅವರ ಧ್ಯೇಯ, ಅವರ ಮನೋಬಲ, ಅಲ್ಲಾಹನಲ್ಲಿದ್ದ ಅಪಾರ ನಂಬಿಕೆ, ಅಲ್ಲಾಹನ ಆಜ್ಞೆಗೆ ಶಿರಬಾಗುವ ದಾಸ್ಯ ಭಾವನೆ, ತನ್ನನ್ನು ಸಂಪೂರ್ಣ ಅಲ್ಲಾಹನಿಗೆ ಅರ್ಪಿಸುವ ಮನೋಭಾವ ಎಲ್ಲವನ್ನೂ ಕುರ್‌ಆನ್ ಎತ್ತಿ ತೋರಿಸುತ್ತದೆ. ಅವರು "ಸಿದ್ದೀಕನ್ ನಬಿಯ್ಯ" (ಸತ್ಯಸಂಧ ನಬಿಯೆಂದು) ಕುರ್‌ಆನ್ ಕೊಂಡಾಡುತ್ತದೆ. (ಮರ್ಯಮ್: 41)

ಒಬ್ಬ ಆದರ್ಶ ಮಗನಾಗಿ ಇಬ್ರಾಹೀಮ್(ಅ) ತನ್ನ ತಂದೆಯನ್ನು ಸನ್ಮಾರ್ಗದೆಡೆಗೆ ಕೊಂಡೊಯ್ಯಲು ಸತತ ಪ್ರಯತ್ನ ಮಾಡುತ್ತಾರೆ. ಆದರೆ ತಂದೆಯಾಗಲಿ ಅಲ್ಲಿಯ ಜನರಾಗಲಿ ಅವರನ್ನು ಅನುಸರಿಸಲಿಲ್ಲ. ಆದರ್ಶ ಪತಿಯಾಗಿ ಅಬಲೆ ಹಾಜರಾರವರನ್ನು ನಿರ್ಜನ ಪ್ರದೇಶದಲ್ಲಿ ಬಿಡುವಾಗಲೂ ಸಹ ಅಲ್ಲಾಹನ ಆಜ್ಞಾಪಾಲನೆಯಂತೆ ನಡೆದರು. ಒಬ್ಬ ಆದರ್ಶ ತಂದೆಯಾಗಿ ತನ್ನ ಕರುಳ ಕುಡಿಯನ್ನು ಮಿನಾದ ಕಲ್ಲು ಬಂಡೆಗಳಲ್ಲಿ ಬಲಿ ಕೊಡುವಾಗಲೂ ಸಹ ಅಂಜದೆ ಅಳುಕದೆ ಅಲ್ಲಾಹನ ಆಜ್ಞೆಯನ್ನು ಪಾಲಿಸಿದರು. ಅವರು ಯಹೂದಿಯೋ, ಕ್ರೈಸ್ತನೋ ಆಗಿರದೆ ಕೇವಲ 'ಮುಸ್ಲಿಮ್' ಆಗಿದ್ದರೆಂಬುದನ್ನು ತಮ್ಮ ಇಡೀ ಜೀವನದಲ್ಲಿ ಸಾಬೀತುಪಡಿಸಿದರು. ಅವರು ಬಹುದೇವಾರಾಧಕರಾಗಿರಲಿಲ್ಲ. ಇಂತಹ ಉಜ್ವಲ ಪ್ರತಿಭೆಯನ್ನು ಬೀರಿ ತಮ್ಮ ಆದರ್ಶವನ್ನು ಜಗತ್ತಿಗೆ ಬಿಟ್ಟು ಹೋಗಿರುವರು. ಆದುದರಿಂದಲೇ ಅಲ್ಲಾಹನು ಅವರನ್ನು ಸಕಲ ಜನರ ನಾಯಕರನ್ನಾಗಿ ಆರಿಸಿಕೊಂಡಿರುವೆನೆಂದು ತಿಳಿಸಿರುವನು. ಒಬ್ಬ ಸತ್ಯವಿಶ್ವಾಸಿಯು ದಿನನಿತ್ಯ 5 ಬಾರಿ ನಮಾಝ್ ಮಾಡುವಾಗ ಪ್ರವಾದಿ ಇಬ್ರಾಹೀಮ್‌ರವರನ್ನೂ(ಅ) ಪ್ರವಾದಿ ಮುಹಮ್ಮದ್‌ರವರನ್ನೂ(ಸ) ಕನಿಷ್ಠ 16 ಬಾರಿಯಾದರೂ ಜ್ಞಾಪಿಸಿಕೊಳ್ಳುತ್ತಾನೆ. "ಓ ಅಲ್ಲಾಹ್! ಇಬ್ರಾಹೀಮ್‌ರವರ(ಅ) ಮೇಲೆ ಹಾಗೂ ಇಬ್ರಾಹೀಮ್‌ರವರ(ಅ) ಸಂತತಿಯ ಮೇಲೆ ನಿನ್ನ ಅನುಗ್ರಹಗಳನ್ನು ವರ್ಷಿಸಿದಂತೆಯೇ ಮುಹಮ್ಮದ್‌ರವರ(ಸ) ಮೇಲೆ ಹಾಗೂ ಮುಹಮ್ಮದ್‌ರವರ(ಸ) ಸಂತತಿಯ ಮೇಲೆ ನಿನ್ನ ಅನುಗ್ರಹಗಳನ್ನು ಸದಾ ವರ್ಷಿಸುತ್ತಿರು."

ಇಬ್ರಾಹೀಮ್‌ರವರ(ಅ) ಜೀವನ ಆದರ್ಶಪ್ರಾಯವಾಗಿತ್ತು. ಮಾನವನಿಗೆ ಪರೀಕ್ಷೆಗಳು ಅನಿವಾರ್ಯ. ಈ ಪರೀಕ್ಷೆಗಳಲ್ಲಿ ಅಲ್ಲಾಹನ ಆಜ್ಞೆಗಳಿಗನುಸಾರ ನಡೆದು ಅಲ್ಲಾಹನ ಕೃಪೆಗೆ ಹೇಗೆ ಪಾತ್ರರಾಗಬೇಕೆಂಬುದನ್ನು ಹಾಗೂ ಜೀವಿತ ಕಾಲದಲ್ಲಿ ಹೇಗೆ ಬಾಳಿ ಬದುಕಬೇಕೆಂಬುದನ್ನು ಮತ್ತು ತನ್ನನ್ನು ತಾನು ಅಲ್ಲಾಹನಿಗೆ ಹೇಗೆ ಅರ್ಪಿಸಿ ಒಬ್ಬ ನೈಜ ಸತ್ಯಸಂಧ, ಧರ್ಮನಿಷ್ಠ, ತ್ಯಾಗಮಯ ಜೀವನ ನಡೆಸಬೇಕೆಂಬುದನ್ನು ಇಬ್ರಾಹೀಮ್‌ರವರ(ಅ) ಉಜ್ವಲ ಜೀವನದಲ್ಲಿ ಕಾಣುವುದು. ಇದು ಜೀವನದ ಉಜ್ವಲ ನಿದರ್ಶನ...!

❁❁❁